# ಬಿನ್ನಹ

ನವಭಾರತದ ಅಭ್ಯುದಯವು ನಾನಾ ಮುಖವಾಗಿ ಪ್ರವಹಿಸುತ್ತದೆ. ದೇಶೋನ್ನತಿಗೆ ಕಾರಣವಾದ ಸಂಸ್ಕೃತಿಯು ದೃಢವಾಗಿ ಬೇರೂರಿ ಕುಡಿಬಿಟ್ಟು ವಿಸ್ತರಿಸಬೇಕಾದರೆ, ಜನತೆಯ ಮನಸ್ಸು ಸಾಹಿತ್ಯ ಮತ್ತು ವಿಚಾರ ಶೀಲತೆಗಳ ಕಡೆಗೆ ತಿರುಗಬೇಕು. ಕೇವಲ ಉತ್ತಮ ಗ್ರಂಥಗಳ ಹೊನಲಿನ ಮಂಜುಳ ರವವು ಕಿವಿಯಲ್ಲಿ ಆಗಾಗ ಸುಳಿದು ಹೋದರೆ ಆಗದು. ಅದು ಬದ್ಧಮೂಲವುಳ್ಳದ್ದಾಗುವಂತೆ ಪಾಠ ಪ್ರವಚನಗಳನ್ನು ಏರ್ಪಡಿಸಬೇಕು. ಅದರಲ್ಲಿಯೂ ಭಾವಿಪ್ರಜೆಗಳಾದ ಇಂದಿನ ಪುಟ್ಟ ಅಭ್ಯರ್ಥಿಗಳು ನೀತಿವಂತರಾಗಿಯೂ, ಸುಜನರಾಗಿಯೂ, ಸಾಹಸಿಗಳಾಗಿಯೂ,ಬುದ್ಧಿವಂತರಾಗಿಯೂ ಪರಿಣಮಿಸುವಂತೆ ಪಾಠಗಳು ಇರುವುದು ಅಗತ್ಯ. ನಮಗೆ ಹಿರಿಯರಿಂದ ಲಭಿಸಿರುವ ಮತ್ತು ಪಿರಮಿಡ್ಡುಗಳಂತಿರುವ ಭಾರತ ರಾಮಾಯಣಗಳು ಹಿರಿಯ ಕೃತಿಗಳು. ಹಾಗೆಯೇ ಭಾಗವತ, ಪುರಾಣಗಳು ನೀತಿಬೋಧಕ ಗ್ರಂಥಗಳು. ಇವುಗಳ ಪಠನವೇ ನಮ್ಮ ಸಂಸ್ಕೃತಿ ಪ್ರಸಾರಕ್ಕೆ ಮೂಲ

ಪ್ರೌಢಶಾಲೆಗೆ ಬರುವ ಅಭ್ಯರ್ಥಿಗಳು ಸುಮಾರು ೧೧–೧೪ ವರ್ಷಗಳ ಅಂತರದಲ್ಲಿರುತ್ತಾರೆ. ಈ ಕಾಲವೇ ಅವರ ಮನಸ್ಸು ಮತ್ತು ದೇಹ ರೂಪುಗೊಳ್ಳುವ ಕಾಲ. ಮನಸ್ಸಿನಲ್ಲಿ ಆ ಸಮಯದಲ್ಲಿ ಹಾಕಿದ ಅಸ್ತಿಭಾರವು ಅವರ ವಿದ್ಯೋನ್ನತಿಗೆ ಬಹು ಮುಖ್ಯವಾದುದು. ಆದ್ದರಿಂದ, ಈ ಮಟ್ಟದ ವಿದ್ಯಾಭ್ಯಾಸದಲ್ಲಿ ನಿರೂಪಿಸಲ್ಪಟ್ಟಿರುವ ಪಾಠಗಳ ವಿಷಯವು ಸುಲಭವಾಗಿ ಮಂದಟ್ಟಾಗುವಮಂತೆಯೂ, ನೀತಿಬೋಧಕವಾಗಿಯೂ, ನಮ್ಮ ಹಿರಿಯ ಗ್ರಂಥಗಳ ಬಗ್ಗೆ ಭಕ್ತಿಯನ್ನು ಹುಟ್ಟಿಸುವಂತಹವುಗಳಾಗಿಯೂ ಇರಬೇಕು. ಈ ಅಂಶವನ್ನು ಗುರಿಯಾಗಿಟ್ಟುಕೊಂಡು, ಈ ಪುಸ್ತಕದಲ್ಲಿನ ಕಥಾವಸ್ತುಗಳನ್ನು ಆರಿಸಲಾಗಿದೆ. ಆದರೆ, ಒಂದೇ ವಿಧವಾದ ಕಥೆಗಳನ್ನು ಓದುವುದರಿಂದ ಉಂಟಾಗುವ ಜಡತ್ವವನ್ನು ನಿವಾರಿಸುವುದಕ್ಕೂ, ಸಾಂಘಿಕ ಜೀವನಕ್ಕೆ ಅತ್ಯವಶ್ಯಕವಾದ ಕೆಲವು ವಸ್ತುಗಳ ವಿಷಯ ಪರಿಚಯವಾಗುವುದಕ್ಕೂ ಅಲ್ಲಲ್ಲಿ, ಪೆಟ್ರೋಲ್, ಬೊಂಬು, ಕಬ್ಬಿಣ, ಮುಂತಾದುವುಗಳ ಪ್ರಬಂಧಗಳನ್ನು ಸೇರಿಸಲಾಗಿದೆ,

ಸಾಹಿತ್ಯಾಭಿಮಾನಿಗಳು ಈ ಪುಸ್ತಕವನ್ನೋದುವಾಗ, ಇಂತಹ ವಸ್ತು-ವಿಷಯ ಗಳು ಪ್ರೌಢಶಾಲೆಯ ನೂತನದ ಅಭ್ಯರ್ಥಿಗಳಿಗಾಗೆಂಬುದನ್ನು ಮರೆಯು ಲಾಗದು.

ಈ ಪುಸ್ತಕದ ಅನೇಕ ಕಥೆಗಳನ್ನು ಭಾರತದ ಆಧಾರದಿಂದ ಆರಿಸ ಲಾಗಿದೆ. ಇದಕ್ಕೆ ಭಾರತದಲ್ಲಿ ನಿರೂಪಿಸಲ್ಪಟ್ಟಿರುವ ಅನೇಕ ಸುಂದರವಾದ ಕಥೆಗಳಿರುವುದೇ ಕಾರಣ. ಎಲ್ಲಕ್ಕೂ ಮಿಗಿಲಾಗಿ, ಆರಿಸಿರುವ ವ್ಯಕ್ತಿತ್ವ ಗಳಲ್ಲಿ ಸ್ತ್ರಿ ಪಾತ್ರಗಳಿಗೆ ಪ್ರಧಾನತೆ ದೊರಕಿದೆ. ಇದನ್ನು ದೋಷವೆಂದು ಎಣಿಸಲಾಗದು. ಪ್ರಾಚೀನಕಾಲದಲ್ಲಿ, ಎಂತೆಂತಹ ಸ್ತ್ರಿ ವ್ಯಕ್ತಿಗಳು ಹುಟ್ಟಿ ಯಶಸ್ವಿನಿಯರಾಗಿದ್ದರು ; ಇಂದೂ, ಬೂದಿಯಲ್ಲಿ ಮುಚ್ಚಿರುವ ಕೆಂಡದಂತೆ, ಎಷ್ಟೊಂದು ಜನರು ಹುಟ್ಟಿ ಏಳಿಗೆಯಾಗಿ, ಕಣ್ಮರೆಯಾಗುತ್ತಿದ್ದಾರೆ : ಎಂಬು ದನ್ನು ಜನತೆಯ ಮನಸ್ಸಿನಲ್ಲಿ ಬೇರೂರತಕ್ಕ ವಿಷಯುವಾಗಿದೆ. ಭಾರತದ ಏಳಿಗೆಗೆ, ಶೀಲವಂತೆಯರಾದ ಸ್ತ್ರೀಯರೇ ಕಾರಣ.

'ಕನ್ನಗಿ ಮತ್ತು ಆಂಡಾಳ್' ಇವರುಗಳ ಕಥೆಗೆ ತಮಿಳು ಪುರಾಣ ಕಥೆಗಳು ಆಧಾರವಾಗಿವೆ. ಚಲನಚಿತ್ರಗಳಲ್ಲಿ ಕಂಡು ಬರುವ ಕಥೆಗಳ ಆಧಾರ ದಿಂದ ಈ ಮೂಲಕ ಕಥೆಗಳನ್ನು ವಿಮರ್ಶಿಸಲಾಗದು. ರೇಷ್ಮೆಯ ಪ್ರಬಂಧವು ಕಿರಿಯದಾಗಿದೆ. ಅದಕ್ಕೂ ಹೆಚ್ಚಿನ ವಿಷಯಗಳು ಅಭ್ಯರ್ಥಿಗಳಿಗೆ (ಅಂದರೆ ರೇಷ್ಮೆಯನ್ನು ಎಳೆಗಳಾಗಿ ರೂಪಾಂತರಿಸುವುದು, ವಿಜ್ಞಾನರೀತ್ಯಾ ಬೇಯಿಸು ವುದು, ಶುಚಿಗೊಳಿಸುವುದು ಇತ್ಯಾದಿ) ಹೆಚ್ಚಿನ ಮಟ್ಟದಲ್ಲಿವೆ. ಇವುಗಳನ್ನು ಬೋಧಿಸುವುದೂ ಕಷ್ಟ. ಬೈಬಲ್ ಗ್ರಂಥಕ್ಕೆ ಸಂಬಂಧಿಸಿದ ಮೈಕೇಲ್ ಎಂಬ A. Milne ಅವರ ವಿರಚಿತ. ನಾಟಕವೇ ಆಧಾರವಸ್ತು. ಅದನ್ನು ನಮ್ಮ ನಾಡಿಗೆ ಅನುಮೋದಿಸುವಂತೆ ಹೆಸರುಗಳನ್ನು ರೂಪಾಂತರಿಸಿದೆ.

ಸಾಮಾನ್ಯವಾಗಿ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಿದ ಅಭ್ಯರ್ಥಿ ಗಳಿಗೆ ಕನ್ನಡಕ್ಕಿಂತಲೂ ಆಂಗ್ಲಭಾಷೆಯೇ ಸುಲಭವೆನಿಸುತ್ತದೆ. ಇದಕ್ಕೆ ಕಾರಣ, ಆ ಭಾಷೆಗಾಗಿ ಪಡುವ ಶ್ರಮ, ಬೋಧನಾಕ್ರಮ ಮತ್ತು 'ವಸ್ತು' ಒಂದು ಕಥೆ ಅಥವಾ ಪ್ರಬಂಧದಲ್ಲಿ, ವಾಕ್ಯಗಳ ವೈವಿಧ್ಯತೆ, ವಾಕ್ಯ ವಿಭಜನೆಗೆ ಅನುಕೂಲಿಸುವಂತೆ ವಾಕ್ಯಗಳು, ವಿಶೇಶಲಂಕಾರಗಳನ್ನೊಳಗೊಂಡ ವಾಕ್ಯ ಗಳು ಇರುತ್ತವೆ. ಇವುಗಳನ್ನು ಬೋಧಕರು ವಿವರಿಸಿ ಹೇಳಿ ಹೇಳಿ, ಅಲ್ಲಿನ

ಅನೇಕ ಶಬ್ದಗಳು ವಿದ್ಯಾರ್ಥಿಗಳ ಮನಸ್ಸಿನಲ್ಲಿ ನಿಲ್ಲುತ್ತವೆ. ಆದ್ದರಿಂದ, ಈ ರೀತಿಯನ್ನು ಅನುಸರಿಸಿ ಈ ಪಾಠಗಳಲ್ಲಿನ ಅನೇಕ ವಾಕ್ಯಗಳು ನೀಳವಾಗಿಯೂ ಕ್ಲಿಷ್ಟ ಕನ್ನಡದಲ್ಲಿಯೂ ಇವೆ.

ಕಡೆಯದಾಗಿ, ಈ ಪುಸ್ತಕಗಳಲ್ಲಿ ಕಂಡುಬರುವ ಅನೇಕ ವಿದ್ವನ್ಮಣಿಗಳು ಪುಸ್ತಕಗಳನ್ನು ಬರೆದು ಪ್ರಚುರಪಡಿಸಿದ್ದಾರೆ. ಇವರಿಗೆಲ್ಲ ನಾನು ಚಿರಋಣಿ ಯಾಗಿದ್ದೇನೆ. 'ಸಂಚಿಯ ಹೊನ್ನಮ್ಮನ' ಕಥೆಗೆ ಮೂಲ, 'ಹದಿಬದೆಯ ಧರ್ಮ' ಪ್ರಮಾದವಶಾತ್, ಈ ಪುಸ್ತಕದಲ್ಲಿ ಕೆಲವು ಅಚ್ಚಿನ ತಪ್ಪುಗಳಿವೆ. ಇದಕ್ಕಾಗಿ ವಿಷಾದಿಸುತ್ತೇನೆ ಮತ್ತು ಇವುಗಳ ಶುದ್ಧ ರೂಪಗಳನ್ನು 'ಶುದ್ಧಾಶುದ್ಧ ಪತ್ರಿಕೆ'ಯಲ್ಲಿ ಕೊಟ್ಟಿದೆ. ಇವುಗಳನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುತ್ತದೆ. ಈ ಪುಸ್ತಕವನ್ನು ಅಂದವಾಗಿಯೂ, ಅತ್ಯಲ್ಪಕಾಲದಲ್ಲಿಯೂ ಮುದ್ರಿಸಿಕೊಟ್ಟ ಶ್ರೀ ಮಲ್ಲಿಕಾರ್ಜುನ ಮುದ್ರಣಾಲಯದವರಿಗೂ ಚಿರಋಣಿಯಾಗಿದ್ದೇನೆ.

ಸಂದರ್ಭೋಚಿತವಾಗಿ ಜನತೆಗೆ ಅರ್ಪಿಸಿದ ಬಿಡಿ ಹೂಗಳನ್ನು ವಿಮರ್ಶಕಾರರೂ, ಸಾಹಿತ್ಯಾಭಿಮಾನಿಗಳೂ ಓದಿ ಪ್ರೋತ್ಸಾಹಿಸುವರೆಂಬ ನಂಬಿಕೆಯಿದೆ. ಈ ಸಂದರ್ಭದಲ್ಲಿ ಲಕ್ಷ್ಮೀಶನ ನುಡಿಗಳನ್ನು ನೆನಪಿಗೆ ತಂದುಕೊಳ್ಳುವದಾದರೆ,

"ಕೆನೆವಾಲಕಡೆದು ನವನೀತಮಂ ತೆಗೆದು ಬಾ ।
ಯ್ಗನಿದಾಗಿ ಸವಿಯುದದರೊಳಗೆ ಪುಳಿವಿಳಿದುರಸ ।
ವನೆಕೆಡಿಸಿದೊಡೆ ಕರೆದ ಸುರಭಿಗಪ್ಪುದೆ ಕೊರತೆ....

ಈ ಮಾತಿನ ಅರ್ಥವನ್ನು ಗ್ರಹಿಸಿ, ವಾಚಕರು ಈ ಪುಸ್ತಕಕ್ಕೆ ಪ್ರೋತ್ಸಾಹವನ್ನೀಯುವರೆಂಬ ನಂಬಿಕೆಯಿಂದ ಧೈರ್ಯಗೊಂಡು, ಇದನ್ನು ಬೆಳಕಿಗೆ ತರಲಾಗಿದೆ.

ಬೆಂಗಳೂರು,
ತಾ॥ ೯-೭-೧೯೫೯.

ಇಂತು,
**ಗ್ರಂಥಕರ್ತ**

# ವಿಷಯ ಸೂಚನೆ

# ಭಾರತೀಯ ಸಂಸ್ಕೃತಿ

ಜನಜನಿತವಾಗಿ ಬಳಕೆಯಲ್ಲಿರುವ ' ಸಂಸ್ಕೃತಿ ' ಎಂಬ ಪದದ ಅರ್ಥವು ಸಾಗರದಂತೆ ವಿಶಾಲವಾದದ್ದು. ಆದ್ದರಿಂದ ಸಂಸ್ಕೃತಿಯೆಂಬ ಶಬ್ದದ ಅರ್ಥವನ್ನು ಒಂದೆರಡು ಮಾತಿನಲ್ಲಿ ಹೇಳುವಂತಿಲ್ಲ; ತಿಳಿಯುವಂತೆಯೂ ಇಲ್ಲ ಈ ಮಹತ್ತರವಾದ ನುಡಿಯ ಸ್ವರೂಪವನ್ನು ವಿಮರ್ಶೆಯಿಂದಲೇ ತಿಳಿಯಬೇಕಾಗಿದೆ.

ಪ್ರಪಂಚದಲ್ಲಿರುವ ಸಕಲ ಜೀವರಾಶಿಗಳಿಗೂ ಸಜನ್ಮವಾಗಿ ಬಂದ ಕೆಲವು ಹುಟ್ಟುಗುಣಗಳಿವೆ. ಇವುಗಳಲ್ಲಿ ಬಹು ಮುಖ್ಯವಾಗಿರುವ ಗುಣಗಳು, ಹೊಟ್ಟೆಗಾಗಿ ಸಾಧನೆ, ವಂಶಾಭಿವೃದ್ಧಿಯ ಅಪೇಕ್ಷೆ, ಇವು ಪ್ರಕೃತಿಯ ಲಕ್ಷಣ. ಪ್ರಾಣಿವರ್ಗಗಳಲ್ಲೆಲ್ಲಾ ಶ್ರೇಷ್ಟ ಜನ್ಮವನ್ನು ಪಡೆದ ಮಾನವನು ಇಷ್ಟರಲ್ಲೇ ತೃಪ್ತನಾಗಲಿಲ್ಲ. ಅವನು ತನ್ನ ಆತ್ಮರಕ್ಷಣೆಗಾಗಿ ಅನೇಕ ಸಾಧನಗಳನ್ನು ಹುಡುಕಿ, ತನ್ನದೇ ಆದ ಒಂದು ಕುಟುಂಬವನ್ನು ರಚಿಸಿಕೊಂಡು, ಅದರ ಸಂರಕ್ಷಣೆಗಾಗಿ ನಾನಾ ಕಷ್ಟಗಳನ್ನನುಭವಿಸಲು ಸಿದ್ಧನಾಗುವನು. ಇದೆಲ್ಲವೂ ಮಾನವನ ದೈಹಿಕ ಸುಖಕ್ಕೆ ಸಂಬಂಧಿಸಿದ್ದು. ಇಷ್ಟಾದನಂತರ, ಶುದ್ಧವಾದ ನೀರು, ನಿರ್ಮಲವಾದ ಗಾಳಿ, ರುಚಿಯಾದ ಆಹಾರ, ಶುಚಿಯಾದ ಉಡುಪು ಇವುಗಳನ್ನು ಹೊಂದಿಸಿಕೊಂಡು ಪರಿಶುದ್ಧವಾದ ಸನ್ನಿವೇಶದಲ್ಲಿ ಜೀವಿಸಿ, ಎಲ್ಲರೊಡನೆ ಸಹಕರಿಸಿ ಕೂಡಿ ಬಾಳುವುದಲ್ಲದೆ, ವಿದ್ಯಾವಂತರಾಗಿ, ಕೀರ್ತಿವಂತರಾಗಿ ಆಧುನಿಕ ವೈಜ್ಞಾನಿಕ ಉಪಭೋಗಗಳನ್ನು ಅನುಭವಿಸುವುದು ನಾಗರಿಕತೆಯ ಮತ್ತು ಭೋಗದ ಲಕ್ಷಣ.

ಒಬ್ಬ ವ್ಯಕ್ತಿಯು ಬಹಳ ವಿದ್ಯಾವಂತನೂ, ಮೇಧಾವಿಯೂ, ವಿಜ್ಞಾನಿಯೂ ಆಗಿದ್ದು, ಉನ್ನತ ಪದವಿಯಲ್ಲಿರಬಹುದು. ಆದರೆ, ಅದೇ ವ್ಯಕ್ತಿಯು ಸುಸಂಸ್ಕೃತನಾಗಿರುವನೆಂದು ಹೇಳಲಾಗುವುದಿಲ್ಲ. ಏಕೆಂದರೆ, ಸಂಸ್ಕೃತಿಯು ಮಾನವನ ಆಂತರ್ಯ ಪ್ರಗತಿಗೆ ಸಂಬಂಧಪಟ್ಟಿರುವುದಲ್ಲದೆ, ಅವನ ಆತ್ಮವನ್ನು ಉನ್ನತ ಸ್ಥಾನಕ್ಕೇರಿಸಿ, ಬ್ರಹ್ಮಾನಂದವನ್ನು ಪಡೆಯಲು

ಸಾಧಕವಾಗಿದೆ. ಹೀಗೆ, ಒಟ್ಟಿನಲ್ಲಿ ಹೇಳುವುದಾದರೆ ' ಪ್ರಕೃತಿಯಿಂದ ವಿಕಸಿಸುವುದೇ ಸಂಸ್ಕೃತಿ.'

ಅಳಿದ ಶ್ರೀಮತಿ ಕಸ್ತೂರಿ ಬಾ, ಅವರು ಬಹಳ ಕಾಲದವರೆಗೆ ಅನಕ್ಷರಸ್ಥ ರಾಗಿದ್ದರೆಂದು ತಿಳಿಯಬಂದಿದೆ. ಆದರೆ, ಆಕೆಯ ಪತಿಭಕ್ತಿ, ಶಾಂತಸ್ವಭಾವ, ಸಹನೆ, ದೇಶವಾತ್ಸಲ್ಯ, ಬಡವರಲ್ಲಿಟ್ಟಿದ್ದ ಪ್ರೇಮ ಮತ್ತು ವಿಶ್ವಕ್ಕೆ ನೀಡಿರುವ ಅಮರ ಸಂದೇಶದ ಬೆಳಕು, ಇವುಗಳು ಆಕೆಯು ಎಂತಹ ಸುಸಂಸ್ಕೃತ ವ್ಯಕ್ತಿ ಯಾಗಿದ್ದಳೆಂದು ವ್ಯಕ್ತಪಡಿಸುತ್ತವೆ. ಆದ್ದರಿಂದ, ಜನಜೀವನದಲ್ಲಿನ ಲೌಕಿಕ ಮತ್ತು ಪಾರಮಾರ್ಥಿಕ ವಿಷಯಗಳ ವಿಮರ್ಶೆಮಾಡಿ ' ಪಾರಮಾರ್ಥಿಕ ' ವಿಚಾರಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟು ಆತ್ಮಾನಂದವನ್ನನುಭವಿಸುವುದೇ ಸಂಸ್ಕೃತಿಯ ಲಕ್ಷಣವಾಗಿವೆ.

ಎರಡು - ಮೂರು ಶತಮಾನಗಳಿಂದೀಚೆಗೆ, ಮಾನವರು ಹೆಚ್ಚಿನ ಪದವೀಧರರಾಗಿ ಸಿವಿಲ್ ಹುದ್ದೆಯನ್ನು ಪಡೆದು ಸರ್ವಾಧಿಕಾರಿಗಳಾಗುವುದ ಕ್ಕಿಂತ ಯಾವುದೂ ಹೆಚ್ಚಿನದಿಲ್ಲವೆಂದು ತಿಳಿದಿದ್ದರು. ಇದಕ್ಕೆ ಕಾರಣ—ನಮ್ಮ ದಾಸ್ಯ ಜೀವನ. ಅಂದಿನಾ ಪ್ರಜೆಗಳು, ಪಾಶ್ಚಾತ್ಯ ಸಂಸ್ಕೃತಿಯ ಮಾಯೆಗೆ ಸಿಕ್ಕಿ, ಅಧಿಕಾರದ ದರ್ಪವನ್ನು ಪ್ರದರ್ಶಿಸಿ, ಐಶ್ವರ್ಯದಿಂದ ಉನ್ಮತ್ತರಾಗಿ ಪ್ರಪಂಚದ ವಿಷಯಾಸಕ್ತಿಗಳಿಗೆ ಮಾರುಹೋಗಿದ್ದರು. ಆದರೆ, ಇಂದಿನ ದೃಷ್ಟಿಕೋಣವು ಬದಲಾಯಿಸಿದೆ. ಇತರ ದೇಶಗಳಂತೆ, ರಕ್ತದ ಕೋಡಿಯನ್ನು ಹರಿಸದೆ, ಭಾರತವು ತನ್ನ ಸ್ವಾತಂತ್ರ್ಯವನ್ನು ಗಳಿಸಿದ್ದೇ ಒಂದು ವೈಶಿಷ್ಟ್ಯ. ಅಹಿಂಸಾ ತತ್ವದ ಪಾಲನೆ, ಶಾಂತಿರಕ್ಷಣೆ, ನ್ಯಾಯ ಪರಿಪಾಲನೆ, ನೈತಿಕ ರಕ್ಷಣೆ, ಪ್ರಗತಿ ಸಾಧನೆ ಇವೇ ಮುಂತಾದ ಸದ್ಗುಣಗಳ ಆಚರಣೆಯಿಂದಲೇ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿತು. ಸ್ವತಂತ್ರರಾದ ಮಾತ್ರಕ್ಕೆ ನಮ್ಮ ಸಾಂಸ್ಕೃತಿಕ ಮಟ್ಟವನ್ನಿಳಿಸಬೇಕೆಂದಿಲ್ಲ. ಈಗ, ಪ್ರತಿಯೊಬ್ಬ ವ್ಯಕ್ತಿಯೂ ಉಚ್ಚತರದ ಜೀವನವನ್ನು ನಡೆಸಿಕೊಂಡು ಬಾಳುತ್ತಾ ನಡೆ, ನುಡಿ, ನೋಟ ಗಳಲ್ಲಿ ಬಿಂಬಿಸುವ ಸತ್ಯ ಮತ್ತು ಶುಭ್ರ ಸುಂದರ ರೂಪಿನಿಂದ ' ಸತ್ವ'ವೆಂಬ ಹೆಡೆಯೆತ್ತಿ ರಜಸ್ಸು ಮತ್ತು ತಮಸ್ಸು ಈ ಗುಣಗಳನ್ನು ಮರ್ದಿಸಿ ಸಾತ್ವಿಕನಾಗಿ ಬಾಳಬೇಕಾದುದೇ ತನ್ನ ಕರ್ತವ್ಯವೆಂದು ಭಾವಿಸಬೇಕು. ಆಗ ಮಾತ್ರ ಭಾರತೀಯ ಸಂಸ್ಕೃತಿಯು ಅಚ್ಚಳಿಯದಂತೆ ಉಳಿಯಬಲ್ಲದು.

ನಾವು ಮಾಡುವ ಕೆಲಸ, ಕಲಿಯುವ ವಿದ್ಯೆ ಇವುಗಳಿಗೆಲ್ಲಾ ಸಂಸ್ಕೃತಿಯು ಸಾಧನೆಯೇ ಗುರಿಯಾಗಿರಬೇಕು. ಪ್ರಾಚೀನ ಕಾಲದಲ್ಲಿ, ಆರ್ಯಾವರ್ತ ದಲ್ಲಿನ ವಿದ್ಯಾಭ್ಯಾಸದ ಗುರಿಯು ಇದೇ ಆಗಿತ್ತೆಂದು ತಿಳಿಯಬಂದಿದೆ. ಬೃಹದಾರಣ್ಯಕ, ಉಪನಿಷತ್ತಿನಲ್ಲಿ ಕಂಡುಬರುವ 'ಮೈತ್ರೇಯಿ' ಎಂಬ ವಿದ್ಯಾರ್ಥಿನಿಯು ತನ್ನ ಗುರುವೂ ಅನಂತರ ತನ್ನ ಪತಿಯೂ ಆದ ಯಾಜ್ಞವಲ್ಕ್ಯರನ್ನು ಪ್ರಶ್ನಿಸಿ, "ಓ ಗುರುವೇ! ಸಮಸ್ತ ಐಶ್ವರ್ಯವನ್ನೊಳ ಗೊಂಡ ಈ ಬೃಹತ್ ಪ್ರಪಂಚವೇ ನನ್ನದಾದರೆ, ನಾನು ದೈವತ್ವವನ್ನು ಪಡೆಯಬಹುದೇ?" ಎಂದು ಕೇಳುತ್ತಾಳೆ. ಈ ಪ್ರಶ್ನೆಯನ್ನು ಅರ್ಥಮಾಡಿ ಕೊಂಡರೆ ಪ್ರಾಚೀನ ಕಾಲದ ವಿದ್ಯಾರ್ಥಿ ವರ್ಗದ ಮಟ್ಟವು ಹೇಗಿದ್ದಿತೆಂದು ತಿಳಿದು ಬರುತ್ತದೆ. ಸಾರ್ವಜನಿಕ ಸಂಸ್ಥೆಗಳು ಅಧೋಗತಿಗಿಳಿದಿರುವ ನಮ್ಮ ನಾಡಿನ ನೈತಿಕಮಟ್ಟವನ್ನು ಉನ್ನತಗೊಳಿಸಿ, ಭಾವೀ ಪ್ರಜೆಗಳು ಸುಸಂಸ್ಕೃತ ರಾಗುವಂತೆ ಪ್ರೇರೇಪಿಸಬೇಕು.

ಪೂಜ್ಯ ಬಾಪೂಜಿಯವರು ತಮ್ಮ ಬಾಲ್ಯದಲ್ಲಿ ಮಾಂಸ ಸೇವನೆ ಮಾಡುತ್ತಿದ್ದ ವಿಷಯದಲ್ಲಿ ಸುಳ್ಳನ್ನು ಹೇಳುತ್ತಿದ್ದರೆಂದೂ, ಒಂದು ಬಾರಿ ಹರಿಶ್ಚಂದ್ರ ನಾಟಕ ಪ್ರದರ್ಶನವನ್ನು ನೋಡಿದ ಪರಿಣಾಮವಾಗಿ ತಮ್ಮ ಮನಸ್ಸಿನಲ್ಲಿ ಸತ್ಯಪ್ರೇಮವು ಅಚಲವಾಗಿ ನಿಂತಿತೆಂದು ತಮ್ಮ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ. ಆದ್ದರಿಂದಲೇ ವಿದ್ಯಾಭ್ಯಾಸದ ಪಾಠಗಳ ಒಂದು ಭಾಗವು ನೈತಿಕ ಶಿಕ್ಷಣಕ್ಕೆ ಸಂಬಂಧಿಸಿದುದಾಗಿರಬೇಕು. ಜಾನಪದ ಲಾವಣಿಗಳು, (ಜನತಾ ಸಾಹಿತ್ಯ), ಸೋಮೇಶ್ವರ ಶತಕ, ಸುಭಾಷಿತ ನೀತಿ ಗಳನ್ನು ಬಾಲಕ ಬಾಲಕಿಯರು ಓದುವುದಕ್ಕೂ, ಕೇಳುವುದಕ್ಕೂ ಅವಕಾಶ ವಿರಬೇಕು. ಭೀಷ್ಮಾಚಾರ್ಯರ ಚಿತ್ತಸ್ಥೈರ್ಯ, ಶ್ರೀಕೃಷ್ಣನ ರಾಜ್ಯತಂತ್ರ, ಅಭಿಮನ್ಯುವಿನ ಪರಾಕ್ರಮ, ಕರ್ಣನ ತ್ಯಾಗ, ರಂತಿದೇವ, ಶಿಬಿ ಮತ್ತು ದಧೀಚಿಯ ವೃತ್ತಾಂತ, ನಳಚರಿತ್ರೆ ಮುಂತಾದ ಕಥಾವಸ್ತುಗಳು ಸಾಹಿತ್ಯದಲ್ಲಿ ಅಡಗಿರಬೇಕು. ರಾಮಾಯಣ, ಭಾರತದ ಕಥೆಗಳನ್ನು ಒಂದು ಬಾರಿ ಕೇಳಿದ್ದರೂ ಸಹ ಅವುಗಳನ್ನು ಆಗಾಗ ಓದಿಕೊಳ್ಳುತ್ತಿರಬೇಕು. ಅಕ್ಬರ್ ಮಹಾಶಯನು ಭಾರತ ಮತ್ತು ರಾಮಾಯಣ ಗ್ರಂಥಗಳನ್ನು ಪಾರ್ಸೀ ಭಾಷೆಗೆ ತರ್ಜಿಮೆ ಮಾಡಿಸಿ ಆಗಾಗ ಓದಿಸಿ ಕೇಳುತ್ತಿದ್ದನೆಂದು ಹಿಂದೂ

ಚರಿತ್ರೆಯಲ್ಲಿ ಹೇಳಲಾಗಿದೆ; ಅಲ್ಲದೆ ದಾರಾಷುಕೊ ದಿನವೂ ವೇದಪಾರಾಯಣ ಮಾಡುತ್ತಿದ್ದನೆಂದು ತಿಳಿದುಬಂದಿದೆ.

ಹೀಗೆ ಸಂಸ್ಕೃತಿಯ ಸಾಧನೆಗಾಗಿ ಉತ್ತಮ ಸಾಹಿತ್ಯ, ಶಿಲ್ಪಕಲೆ, ಸಂಗೀತ, ನಾಟಕಗಳು ಹೆಚ್ಚಾಗಿ ಪ್ರಸಾರವಾಗಬೇಕು. ಇವಕ್ಕೆಲ್ಲಾ ಸಹಕಾರಿಯಾಗುವ ಸಂಸ್ಕೃತ ಭಾಷೆಯನ್ನು ಪ್ರತಿಯೊಬ್ಬ ಭಾರತೀಯನೂ ಕಲಿಯಬೇಕು. ಅದರಲ್ಲಿಯೂ ಭಗವದ್ಗೀತೆಯನ್ನು ಅರ್ಥಸಹಿತವಾಗಿ ನಾಡಿನ ಶಾಲೆಗಳಲ್ಲೆಲ್ಲಾ ಬೋಧಿಸಬೇಕು. ಈ ಗೀತೆಯು ಎಲ್ಲ ಮತಗಳನ್ನು ಗೌರವಿಸಿದೆ. ಗೀತೆಯು ಎಲ್ಲಾ ದೇಶೀಯ ಭಾಷೆಗಳಿಗೆ ಭಾಷಾಂತರ ಮಾಡಿಸಿ, ಪ್ರತಿಯೊಬ್ಬರೂ ಓದುವಂತೆ ಪ್ರೇರೇಪಿಸಬೇಕೆಂದು 'ಥೋರೋ' ಎಂಬ ಅಮೆರಿಕನ್ ತತ್ವಜ್ಞನು ಹೇಳಿದ್ದಾನೆ. ಹೀಗೆ, ಗೀತ ಪ್ರವಚನ, ಉತ್ತಮ ಸಾಹಿತ್ಯ ವಾಚನದ ಮೂಲಕ ಅಧ್ಯಾತ್ಮಿಕ ಜೀವನದ ಉನ್ನತಿಯು ಯಾವ ಭಾರತೀಯನಿಗೆ ಬೇಡ?

## ಪ್ರಶ್ನೆಗಳು

೧. 'ಸಂಸ್ಕೃತಿ' ಎಂಬ ಶಬ್ದದ ಅರ್ಥವನ್ನು ಸ್ಪಷ್ಟಗೊಳಿಸಿ.

೨. ಪ್ರಾಚೀನ ಕಾಲದ ವಿದ್ಯಾಭ್ಯಾಸದ ಗುರಿಯೇನು?

೩. ಸಂಸ್ಕೃತಿ ಪ್ರಸಾರಕ್ಕೆ ಅವಶ್ಯಕವಾದ ಸಾಧನೆಗಳಾವುವು?

# ಸಬರಮತಿ ದೇವಿ

ಕಾಥೇವಾಡದ ಒಂದು ಪ್ರಾಥಮಿಕ ಶಾಲೆಯಲ್ಲಿ ಆಚಾರ್ಯ ಸಂಪನ್ನನಾದ ಒಬ್ಬ ಗುಜರಾತಿ ಬ್ರಾಹ್ಮಣನಿದ್ದನು. ವೈದಿಕ ವೃತ್ತಿಯನ್ನವಲಂಬಿಸಿದ್ದ ಈತನ ಹೆಸರು 'ಬ್ರಹ್ಮಾಚಾರ್ಯ ಥಾಕೂರ್,' ಎಂದು. ಈತನ ಮಡದಿ ಚಾರುಬಾಲೆಯು ಶೀಲ ಸೌಜನ್ಯಗಳಲ್ಲಿ ಥಾಕೂರನಿಗೆ ತಕ್ಕ ಸಹಧರ್ಮಿಣಿ ಎನಿಸಿದ್ದಳು. ಈ ಸತಿಪತಿಯರಿಗೆ ಮೂವರು ಗಂಡು ಮಕ್ಕಳೂ ಒಬ್ಬ ಮಗಳೂ ಜನಿಸಿದರು. ಮಗಳ ಹೆಸರು 'ಸಬರಮತಿ.'

ಸಬರಮತಿಯ ಬಾಲ್ಯವು ಮನೆಯಲ್ಲಿ ನಡೆಯುತ್ತಿದ್ದ ಪೂಜೆ, ಪ್ರಾರ್ಥನೆ, ತುಳಸೀ ರಾಮಾಯಣ ಇಂತಹ ಸತ್ಕಥಾ ಕಾಲಕ್ಷೇಪಗಳ ವಾತಾವರಣದಲ್ಲಿಯೇ ಕಳೆಯಿತು. ಪ್ರತಿ ಪ್ರಾತಃಕಾಲದಲ್ಲಿಯೂ, ಈಕೆಯ ತಂದೆಯು ಭಗವದ್ಗೀತೆಯ ಅನೇಕ ಶ್ಲೋಕಗಳನ್ನು ಪಠನಮಾಡುತ್ತಿದ್ದರು. ಇವುಗಳನ್ನು ಕೇಳುತ್ತ, ಸಬರಮತಿಯು ಮನನಮಾಡಿಕೊಳ್ಳುತ್ತಿದ್ದಳು. ಇವರ ಮನೆಗೆ ಸಮೀಪದಲ್ಲಿದ್ದ ಕೃಷ್ಣ ಭಜನಮಂದಿರದಲ್ಲಿ ನಡೆಯುತ್ತಿದ್ದ ಭಜನೆ ಮತ್ತು ಪುರಾಣಶ್ರವಣಕ್ಕೆ ತಾಯಿ ಚಾರುಬಾಲೆಯೊಡನೆ ಪ್ರತಿ ಶುಕ್ರವಾರವೂ, ಏಕಾದಶಿಯ ದಿನವೂ ತಪ್ಪದೆ ಹೋಗುತ್ತಿದ್ದಳು. ಹಸಿವು, ನಿದ್ರೆ ಇವುಗಳ ಅರಿವಿಲ್ಲದೆಯೇ ಈ ಬಾಲಕಿಯು ಪುರಾಣ ಮುಗಿಯುವವರೆಗೂ ತಲ್ಲೀನಳಾಗಿ ಕೇಳುತ್ತಿದ್ದುದನ್ನು ಕಂಡು ಇವಳ ಮಾತಾಪಿತೃಗಳು ಆಶ್ಚರ್ಯಪಡುತ್ತಿದ್ದರು.

ಕೇವಲ ಒಂಭತ್ತನೆಯ ವಯಸ್ಸಿನ ಬಾಲಕಿಯಾಗಿರುವಾಗಲೇ ಸಬರಮತಿಯ ವಿವಾಹವು, ರಾಜಕೋಟೆಯ ಒಂದು ಪ್ರಾಥಮಿಕ ಶಾಲೆಯಲ್ಲಿ ಉಪಾಧ್ಯಾಯನಾಗಿದ್ದ ಮಹದೇವ ಥಾಕೂರನೊಡನೆ ನಡೆಯಿತು. ಈತನು ಬಡವನಾದರೂ ಪ್ರಾಮಾಣಿಕನಾಗಿದ್ದನು. ಮದುವೆಯ ವೇಳೆಯ ಹೊತ್ತಿಗೆ ಈತನಿಗೆ ೩೦ ವರ್ಷಗಳ ಮೇಲಾಗಿತ್ತು. ಬಡತನದ ಬೇಗೆಗೆ ಸಿಲುಕಿ ತತ್ತರಿಸುತ್ತಿದ್ದ ಈತನಿಗೆ ಹೆಣ್ಣು ಕೊಟ್ಟು ಗೃಹಸ್ಥನನ್ನಾಗಿ ಮಾಡಲು ಯಾವ ಕನ್ಯಾಪಿತೃವೂ ಹಿಂಜರಿಯುತ್ತಿದ್ದನು. ಇಂತಹ ವರನನ್ನೇ ಕೈಹಿಡಿದ

ಸಬರಮತಿಯು ಪ್ರಸನ್ನಚಿತ್ತಳಾಗಿಯೇ ಕುಟುಂಬ ಜೀವನವನ್ನು ನಡೆಸುತ್ತಿದ್ದಳು. ಬರುವ ಅಲ್ಪ ವೇತನದಿಂದ ಜೀವನ ನಿರ್ವಾಹವು ಕಷ್ಟವಾಗಿ, ಈ ದಂಪತಿಗಳು ಮಾಸದಲ್ಲಿ ಎಷ್ಟೋ ದಿನಗಳು ಉಪವಾಸ ಮಾಡುತ್ತಿದ್ದರು. ಈ ಕಾರ್ಪಣ್ಯ ದಿನಗಳಲ್ಲಿಯೂ ಸಹ, ಇವರಿಬ್ಬರೂ ಅನ್ಯೋನ್ಯರಾಗಿ ಶಾಂತತೆಯಿಂದಲೇ ಪರಸ್ಪರ ವರ್ತಿಸುತ್ತಿದ್ದರು. ಈ ಜೀವನದಲ್ಲಿಯೂ ಭಗವಂತನ ಧ್ಯಾನವನ್ನು ತಪ್ಪದೆ ಮಾಡುತ್ತಿದ್ದರು; ಅಲ್ಲದೆ ಸಾಂಪ್ರದಾಯಿಕವಾಗಿ ನಡೆಸಬೇಕಾದ ಪೂಜೆ, ವ್ರತಗಳನ್ನು ನಡೆಸುತ್ತಿದ್ದರು.

ಸಬರಮತಿಯು ಹದಿನೇಳನೆಯ ವಯಸ್ಸಿನಲ್ಲಿ ಪುತ್ರೋತ್ಸವವಾಯಿತು. ಮಗುವಿಗೆ 'ಭೋಲಾರಾಮು' ನೆಂದು ಹೆಸರಿಡಲಾಯಿತು. ಸ್ವಲ್ಪ ಕಾಲದ ನಂತರ, ಕಣ್ಮರೆಯಾದ ಪೂಜ್ಯ ಗಾಂಧೀಜೀಯವರ ತಂದೆ ಕಬಾಗಾಂಧಿಯವರು ತಮ್ಮ ಪತ್ನಿ ಪುತ್ಥಲೀಬಾಯಿ ಮತ್ತು ಮಕ್ಕಳೊಡನೆ ರಾಜಕೋಟೆಗೆ ಬಂದು ನೆಲಸಿದರು. ಇವರು ವಾಸಿಸುತ್ತಿದ್ದ ಪುರಸ್ಕಾರವಾದ ಮನೆಯು ಸಬರಮತಿಯು ಕುಟೀರದ ಎದುರಿನಲ್ಲಿಯೇ ಇದ್ದಿತಾಗಿ, ಎರಡು ಕುಟುಂಬದವರಿಗೂ ಬಳಕೆಯುಂಟಾಯಿತು. ಬಾಲಕ ಮೋಹನದಾಸ್ ಕರ್ಮಚಂದ ಗಾಂಧಿಯೂ, ಭೋಲಾರಾಮನೂ ಕಾಲಕ್ರಮೇಣ ಒಡನಾಡಿಗಳಾದರು. ಈ ಸ್ನೇಹಿತರ ಅನುವಿನಿಂದ, ಮಾತೆಯರಲ್ಲೂ ಸ್ನೇಹವುಂಟಾಯಿತು. ಇದರಿಂದಾಗಿ, ಆ ಬಡ ಕುಟುಂಬಕ್ಕೆ ಪುತ್ಥಳೀಬಾಯಿಯು ಯಥೋಚಿತನಾದ ಸಹಾಯ ಮಾಡುತ್ತಿದ್ದಳು. ಸ್ವಭಾವತಃ, ಆಚಾರ್ಯ ಸಂಪನ್ನಳೂ, ದೇವರಲ್ಲಿ ಭಕ್ತಿಯುಳ್ಳವಳೂ ಆದ ಪುತ್ಥಳೀಬಾಯಿಗೆ, ಮಡಿ, ದೈವಭಕ್ತಿ, ಧರ್ಮ ಪರಾಣತೆಯುಲ್ಲಿ ನಿಸ್ಸೀಮಳಾದ ಸಬರಮತಿಯು ಗೆಳತಿಯಾದುದು ಹಾಲಿಗೆ ಸಕ್ಕರೆಯನ್ನು ಬೆರಸಿದಂತಾಯಿತು. ಇವರಿಬ್ಬರೂ ಒಟ್ಟಿಗೂಡಿ ಹಾವೇಲಿ (ಅಂದರೆ ವೈಷ್ಣವದೇವಾಲಯು) ಗೆ ಪ್ರತಿ ಸಂಜೆಯಲ್ಲಿಯೂ ಹೋಗಿ ಬರುತ್ತಿದ್ದರು. ಇದಲ್ಲದೆ, ಪ್ರತಿದಿನವೂ ಮನೆಯಲ್ಲಿ ಪ್ರಾತಃಕಾಲದ ಪೂಜೆ, ಪಾರಾಯಣವಿಲ್ಲದೆ ಇವರು ಊಟಮಾಡುತ್ತಿರಲಿಲ್ಲ. ಒಂದು ಬಾರಿ ಚಾತುರ್ಮಾಸ ದಿನಗಳಲ್ಲಿ ಸೂರ್ಯನ ದರ್ಶನವಿಲ್ಲದೆ ಊಟ ಮಾಡಲಾಗದೆಂದು ಇಬ್ಬರೂ ಹಠತೊಟ್ಟರು. ಅನೇಕ ದಿನಗಳಲ್ಲಿ ಆಕಾಶವು ಮೋಡದಿಂದ ಕವಿದಿರುತ್ತಿತ್ತು; ಸೂರ್ಯನ ದರ್ಶನವು ಲಭಿಸುವುದೇ ಕಷ್ಟವಾಗುತ್ತಿತ್ತು.

ಹೀಗಾಗಿ ೨-೩ ದಿನಗಳು ಒಟ್ಟೊಟ್ಟಿಗೆ ಉಪವಾಸವಿರುತ್ತಿದ್ದರು. ಈ ವ್ರತಗಳ ದೆಸೆಯಿಂದ ಹಣ್ಣಾಗುತ್ತಿದ್ದ ಮಾತೆಯರನ್ನು ಕಂಡು ಮಕ್ಕಳು ನೊಂದು, ಮೋಡಗಳಲ್ಲಿ ಮರೆಯಿಸಿಕೊಳ್ಳುವ ಸೂರ್ಯನನ್ನು ಶಪಿಸುತ್ತಿದ್ದುದೂ ಉಂಟು. ಆದರೆ ಈ ಸ್ನೇಹಿತೆಯರು ಹಸನ್ಮುಖರಾಗಿಯೇ ಉಪವಾಸ ದಿನಗಳನ್ನು ಕಳೆಯುತ್ತಿದ್ದರು.

ಹೀಗೆ ಪವಿತ್ರ ಜೀವನ ಯಾತ್ರೆಯನ್ನು ನಡೆಸುತ್ತಿದ್ದ ಸಬರಮತಿಯ ಕುಟುಂಬಕ್ಕೆ ದೈವೇಚ್ಛೆಯಿಂದ ಧಕ್ಕೆಯುಂಟಾಯಿತು. ಕಾಲರಾ ಬೇನೆಯ ಸೋಂಕಿಗೆ ಬಲಿಯಾಗಿ ಮಹದೇವ ಥಾಕೂರನೂ, ಭೋಲಾರಾಮನೂ ಮಡಿದರು. ಈ ವಿಯೋಗದಿಂದ ತರುಣಿ ಸಬರಮತಿಯು ತತ್ತರಿಸಿಹೋದಳು. ಪುತ್ಥಳಿಬಾಯಿಯ ಸ್ನೇಹ, ಮಮತೆಗಳ ಬೆಂಬಲವಿಲ್ಲದಿದ್ದಲ್ಲಿ, ಏಕಕಾಲದಲ್ಲಿ ವಿಧವೆಯೂ ಪುತ್ರವಿಹೀನೆಯೂ ಆದ ಸಬರಮತಿಯು ಎಂದೋ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಳು. ೬-೭ ವರ್ಷಗಳವರೆಗೂ ಇಂತಹ ಬರಡು ಜೀವನ ವನ್ನು ಸಾಗಿಸಿದ ನಂತರ, ಆಕೆಯ ಜೀವನ ಧ್ಯೇಯವು ಬದಲಿಸಿತು. ದೇವರಲ್ಲಿ ಆಸಕ್ತಿ ಮತ್ತೂ ಹೆಚ್ಚಿತು. ಇದರಿಂದ ಮುಂದಕ್ಕೆ, ವೇದಾಂತದ ಕಡೆಗೆ ಮನಸ್ಸು ಒಲಿಯಿತು. ಪರಮಾತ್ಮನ ನಿರಾಕಾರತ್ವ, ಸರ್ವಸಮತೆಯ ದೃಷ್ಟಿ ಈ ತತ್ವಗಳು ಆಕೆಯ ಹೃದಯನ್ನಪ್ಪಿದುವು.

ಕ್ರಮೇಣ, ಸಬರಮತಿಯು ದೀನದಲಿತರ ಸೇವೆಯಲ್ಲಿ ನಿರತಳಾದಳು ; ಜಾತಿ ಮತ ಭೇದವನ್ನೆಣಿಸದೆ ರೋಗಿಗಳಿಗೆ ಉಪಚರಿಸುತ್ತಿದ್ದಳು. ಅನೇಕ ವೇಳೆ, ಪುತ್ಥಳೀಬಾಯಿಗೂ ಸಬರಮತಿಗೂ ಮತಭೇದವುಂಟಾಗಿ ಸಂವಾದವೂ ನಡೆಯುತ್ತಿತ್ತು. ಆದರೆ, ಈಕೆಯ ಸೇವಾತತ್ಪರತೆಯು, ತರುಣ ಮೋಹನ ದಾಸ್ ಗಾಂಧಿಯವರ ಮೇಲೆ ಉತ್ತಮ ಪರಿಣಾಮವನ್ನುಂಟುಮಾಡಿತು. ಈ ವೇಳೆಗೆ ಸ್ತ್ರೀರತ್ನ ಕಸ್ತೂರಿಬಾಯಿಯೊಡನೆ ಗಾಂಧೀಜಿಯ ವಿವಾಹವು ನಡೆದಿತ್ತು. ಕಸ್ತೂರಿಬಾಯಿ ಅತ್ತೆಯ ಮನೆಯಲ್ಲಿದ್ದಳು.

ಇಂತಿರಲು, ಅದೊಂದು ಕೃಷ್ಣಪಕ್ಷದ ರಾತ್ರಿಯಲ್ಲಿ ಒಂದು ಮುಸಲ್ಮಾನರ ಕುಟುಂಬವು ಗಾಡಿ ಕಟ್ಟಿಕೊಂಡು ರಾಜಕೋಟೆಯ ಮುಖಾಂತರ ಹೊರಟಿತ್ತು. ಗಾಡಿಯಲ್ಲಿ ಒಬ್ಬ ತುಂಬು ಗರ್ಭಿಣಿ ಸ್ತ್ರೀ ಇದ್ದು ಆಕೆಗೆ ಹೆರಿಗೆಯಾಗುವ ಸೂಚನೆಯು ಕಂಡುಬಂದಿತು. ಅಲ್ಲಿಯೇ ಆಕೆಯನ್ನು

ಇಳಿಸಬೇಕಾಯಿತು. ಆಕೆಯ ಪ್ರಾಣ ಮತ್ತು ಮಾನರಕ್ಷಣೆಗಾಗಿ ಆ ಬೀದಿಯೊಳಗಿನ ಯಾರ ಮನೆಯಲ್ಲಿಯೂ ಸ್ಥಳವು ಲಭಿಸಲಿಲ್ಲ. ಇದರಿಂದ ಆಕೆಯ ಪತಿಗೆ ದಿಕ್ಕುತೋಚದಂತಾಯಿತು. ಗಾಡಿಯೊಳಗಿದ್ದ ಇತರ ಮಕ್ಕಳು ಅಳಲು ಮೊದಲುಮಾಡಿದರು. ಆ ಸಮಯದಲ್ಲಿ, ಸಬರಮತಿದೇವಿಯು ತನ್ನ ಏಕಮಾತ್ರ ಕೋಣೆಯನ್ನೊಳಗೊಂಡ ಕುಟೀರದಲ್ಲಿಯೇ ಸ್ಥಳಾವಕಾಶವನ್ನು ಮಾಡಿಕೊಟ್ಟು ಹೆರಿಗೆಗೂ ನೆರವಾದಳು. ಜನಿಸಿದ ಗಂಡುಮಗುವಿಗೆ ಸ್ನಾನ ಮಾಡಿಸಲು ಬಿಸಿನೀರಿನ ಅಗತ್ಯವಿತ್ತು. ಸದಾ ತಣ್ಣೀರಿನಲ್ಲಿಯೇ ಮಿಾಯುತ್ತಿದ್ದ ಸಬರಮತಿಗೆ ಇದು ದುಸ್ಸಾಧ್ಯವಾಯಿತು. ಯತ್ನವಿಲ್ಲದವಳಾಗಿ, ಬಿಸಿನೀರಿಗಾಗಿ ಪುತ್ಥಳೀಬಾಯಿಯ ನೆರವನ್ನು ಕೋರಿದಳು. ಮುಸಲ್ಮಾನರ ಕುಟುಂಬವನ್ನು ತನ್ನ ಮನೆಯಲ್ಲಿಯೇ ಉಳಿಸಿಕೊಂಡು ಸ್ಪರ್ಶ ಮಾಡಿದ್ದರಿಂದಲೇ ಸಬರಮತಿಯು ಜಾತಿಭ್ರಷ್ಟಳಾದಳೆಂದು ಪುತ್ಥಳೀಬಾಯಿಯು ತೀರ್ಮಾನಿಸಿದಳು. ಅಲ್ಲದೆ, ತನ್ನ ಸ್ನೇಹವನ್ನು ಧಿಕ್ಕರಿಸುವ ಯೋಚನೆಯಿಂದಲೇ ಇಂತಹ ಅಸಂಬದ್ಧ ಕಾರ್ಯವನ್ನಾಚರಿಸಿರುವಳೆಂದು ಸಿಟ್ಟಾದಳು. ಬಿಸಿನೀರನ್ನು ಕೊಡಲೊಪ್ಪಲಿಲ್ಲ. ತರುಣ ಗಾಂಧೀಜಿಯು ಸಹ ಬಿಸಿನೀರನ್ನು ಒದಗಿಸಬೇಕೆಂದು ತನ್ನ ತಾಯಿಯನ್ನು ಕೇಳಿಕೊಂಡರು; ಫಲಿವಾಗಲಿಲ್ಲ. ದಿಕ್ಕೆಟ್ಟ ಸಬರಮತಿಯ ಸ್ಥಿತಿಯನ್ನು ಗಾಂಧೀಜಿಯು ಅಳೆದು ನೋಡಿ ದುಃಖಿತರಾದರು. ಮನೆಯೊಳಗಿನ ಒಂದು ಹರಿವಾಣವನ್ನು ತನ್ನ ತಾಯಿಯಿಂದ ಬೇಡಿತಂದು, ಅದೇ ಕೇರಿಯಲ್ಲಿದ್ದ ಒಬ್ಬ ಗೌಳಿಗರ ಮನೆಗೆ ತನ್ನ ಹೆಂಡತಿಯನ್ನು ಕರೆದೊಯ್ದು, ಆಕೆಯಿಂದಲೇ ನೀರನ್ನು ಕಾಯಿಸಿ, ಅದನ್ನು ಹೊತ್ತುಕೊಂಡುಹೋಗಿ ಸಬರಮತಿಗೆ ಕೊಡಬೇಕೆಂದು ಕಟ್ಟಾಜ್ಞೆ ಮಾಡಿದರು. ಅತ್ತೆಯ ನಿಷ್ಠುರತೆ, ಪತಿಯ ಭೀಕರ ಕೋಪ ಇವುಗಳ ಮಧ್ಯೆ ಸಿಲುಕಿ ತಲ್ಲಣಿಸುತ್ತಾ, ಕಸ್ತೂರಿಬಾಯಿಯು ಬಿಸಿನೀರನ್ನು ಒದಗಿಸಿದಳು. ಮರುದಿನದೊಳಗೆ ಬಾಣಂತಿಯು ಬಹಳಮಟ್ಟಿಗೆ ಚೇತರಿಸಿಕೊಂಡಳು. ಆಕೆಯ ಪತಿಯೂ, ಮತ್ತಿತರೂ ಸಬರಮತಿಗೂ ಸಾಷ್ಟಾಂಗ ನಮಸ್ಕಾರ ಮಾಡಿ, ಗಾಂಧೀಜಿಗೂ ಅವರ ಪತ್ನಿಗೂ ಹೃತ್ಪೂರ್ವಕವಾಗಿ ಧನ್ಯವಾದಗಳನ್ನರ್ಪಿಸಿದನು. ಆತನ ಕೃತಜ್ಞತೆಯು ಎಲ್ಲೆ ಮಿಾರಿತ್ತು. ಸಬರಮತಿಯ

ಉಪಕಾರವನ್ನು ಬಾರಿಬಾರಿಗೂ ನೆನೆಯುತ್ತ ಕಣ್ಣೀರು ತುಂಬಿದವನಾಗಿ, ಗಾಡಿ ಕಟ್ಟಿಕೊಂಡು ಮರುದಿನ ಪ್ರಯಾಣ ಬೆಳೆಸಿದನು.

ಈ ಘಟನಾನಂತರ, ಹಿಂದೂ ಗೃಹಸ್ಥರ ಮನೆಯೊಳಕ್ಕೆ ಸಬರಮತಿಗೆ ಪ್ರವೇಶವು ದೊರೆಯಲಿಲ್ಲ. ಆದರೆ, ಇದರಿಂದ ಆಕೆಯ ಆತ್ಮತೇಜಸ್ಸು ಮತ್ತೂ ವೃದ್ಧಿಗೊಂಡಿತು ಮತ್ತು ಆಕೆಗೆ ಯಾರ ಮೇಲೂ ದ್ವೇಷವುಂಟಾಗ ಲಿಲ್ಲ. ಅಲ್ಲಿಂದ ಮುಂದೆ, ಆ ಊರಿನ ವಿಧವೆಯರನ್ನು ತನ್ನ ಕುಟೀರಕ್ಕೆ ಬರಮಾಡಿಕೊಂಡು ನೂಲುವುದನ್ನು ಹೇಳಿಕೊಡುತ್ತಿದ್ದಳು. ಇವರಿಗೆ, ಪುರಾಣದ ಕಥೆಗಳನ್ನು ಹೇಳುತ್ತಿದ್ದಳು. ಶುಕ್ರವಾರ ಸಾಯಂಕಾಲದಲ್ಲಿ ತನ್ನ ಕುಟೀರದ ಮುಂದೆ ಭಜನೆಯ ಏರ್ಪಾಡನ್ನು ಮಾಡಿದಳು. ಇದರಲ್ಲಿ ಯಾರು ಬೇಕಾದರೂ ಭಾಗವಹಿಸಲು ಅನುಮತಿಯಿತ್ತು. ಹೀಗೆ ಸಬರ ಮತಿಯು ಹಾಕಿದ ಭಜನೆಯ ತಳಹದಿಯು ಪ್ರಬಲಿಸಿ, ಅದೇ ಭಜನೆಯೇ ಗಾಂಧೀಜಿಯ ಜೀವನದ ಗುರಿಯಾಯಿತು. ಸಬರಮತಿಯ ಜಾತಿಗಳಲ್ಲಿನ ಸರ್ವಸಮತೆಯ ದೃಷ್ಟಿಯು ಆತನ ಆತ್ಮದಲ್ಲಿ ಜಾಗೃತವಾಯ್ತು. ಈ ತತ್ವವೇ ಆತನ ಭವಿಷ್ಯದ ಸತ್ಯಾಗ್ರಹ ಚಳುವಳಿಗೆ ಸೋಪಾನವಾಯಿತೆಂಬುದ ರಲ್ಲಿ ಸಂಶಯವೇ ಇಲ್ಲ. ನಲವತ್ತುಮೂರು ವರ್ಷಗಳ ಸ್ವಚ್ಛ ಬಾಳನ್ನು ಕಳೆದ ಸಬರಮತಿಯು ಇದ್ದಕ್ಕಿದ್ದಂತೆಯೇ ಜ್ವರಪೀಡಿತಳಾದಳು; ಜ್ವರವು ವಿಷಮಿಸಿ ಒಂದು ಪ್ರದೋಷ ಸಮಯದಲ್ಲಿ ತನ್ನ ಜೀವನಯಾತ್ರೆಯನ್ನು ಮುಗಿಸಿದಳು. ಸಾಯುವ ಸಮಯದಲ್ಲಿ ಗಾಂಧೀಜಿಯೂ, ಕಸ್ತೂರಿ ಬಾಯಿಯೂ, ಭಜನೆಗೆ ಬರುತ್ತಿದ್ದ ಅನೇಕರೂ ನೆರೆದಿದ್ದರು. ಆಕೆಯು ಕಣ್ಮುಚ್ಚಿದ ಸ್ಥಳದಲ್ಲಿ ಒಂದು ವೃಂದಾವನವು ಕೆಲವು ದಿನಗಳೊಳಗಾಗಿ, ಗಾಂಧೀಜಿ ಮತ್ತು ಅವರ ಸ್ನೇಹಿತರಿಂದ ನಿರ್ಮಿತವಾಯಿತು. ಸಬರಮತೀ ದೇವಿಯ ದೇಹವು ಕಣ್ಮರೆಯಾದರೂ, ಆಕೆಯ ಉಜ್ವಲ ಆತ್ಮಜ್ಯೋತಿಯು ಗಾಂಧೀಜಿಯ ಆತ್ಮದಲ್ಲಿ ಪ್ರಜ್ವಲಿಸಿತು. ಅವರು ಅಂದಿನಿಂದಲೂ, ಕ್ರೈಸ್ತರು, ಹಿಂದೂಗಳು ಮತ್ತು ಮುಸಲ್ಮಾನರೆಂಬ ಭೇದಭಾವವನ್ನು ತೊಡೆದುಹಾಕಿ ದರು. ಅನೇಕ ವರ್ಷಗಳ ನಂತರ ಗಾಂಧೀಜಿಯು ಸೇವಾಗ್ರಾಮದಲ್ಲಿ ನಿರ್ಮಿಸಿದ ಸಬರಮತಿ ಆಶ್ರಮವೂ ಸಹ ಆಕೆಯ ಚಿರನೆನಪಿಗಾಗಿಯೇ.

ಹೀಗೆ, ಬಡವರಾದರೂ ಸುಸಂಸ್ಕೃತರಾದ ಕುಟುಂಬದಲ್ಲಿ ಜನಿಸಿ ಚಿರದುಃಖಿನಿಯಾಗಿ ಬಾಳಿ, ಅಳಿದ ಸಬರಮತಿಯು ಸಮಸ್ತ ಆರ್ಯ ಮಹಿಳೆಯರಿಂದಲೂ ಪುರಸ್ಕರಿಸಲು ಯೋಗ್ಯಳೆಂಬ ಅಭಿಮತವು ಸರ್ವಸಮ್ಮತವಾಗಿದೆ.

## ಪ್ರಶ್ನೆಗಳು

೧. ಸಬರಮತಿಯ ಬಾಲ್ಯ ಜೀವನವನ್ನು ವಿವರಿಸಿ.

೨. ಆಕೆಯ ಗೃಹಸ್ಥಾಶ್ರಮ ಜೀವನದಲ್ಲಿ ನಡೆದ ಎರಡು ಮುಖ್ಯ ಘಟನೆಗಳನ್ನು ವಿವರಿಸಿ.

೩. 'ಸಬರಮತಿಯ ಸಮತಾ ದೃಷ್ಟಿಯು' ಸರಿಯೇ? ನಿಮ್ಮ ಅಭಿಪ್ರಾಯವನ್ನು ತಿಳಿಸಿ.

# ಕರ್ನಾಟಕ ಕವಯಿತ್ರಿ

ಹದಿನೇಳನೆಯ ಶತಮಾನದಲ್ಲಿ (ಅಂದರೆ ೧೬೭೨-೧೭೦೪) ನಮ್ಮ ಮೈಸೂರು ದೇಶವನ್ನು ಚಿಕ್ಕದೇವರಾಜ ಒಡೆಯರು ಆಳುತ್ತಿದ್ದರು. ಆಗಿನ ಕಾಲದಲ್ಲಿ ಈ ದೇಶಕ್ಕೆ ಶ್ರೀರಂಗಪಟ್ಟಣವು ರಾಜಧಾನಿಯಾಗಿತ್ತು. ಈ ಅರಸು ರಾಜತಂತ್ರ ನಿಪುಣನಷ್ಟೇ ಅಲ್ಲದೆ ಮೇಧಾವಿಯೂ, ಸಕಲ ಶಾಸ್ತ್ರಪಾರಂಗತನೂ ಆಗಿದ್ದನು. ಸರಸ್ವತಿಯ ಪೂಜಾಮಂದಿರದಂತಿದ್ದ ಆತನ ಆಸ್ಥಾನವು ವಿದ್ವನ್ಮಣಿಗಳಿಂದಲೂ, ಕವಿಕಬ್ಬಿಗಿತಿಯರಿಂದಲೂ ತುಂಬಿ ರಾರಾಜಿಸುತ್ತಿತ್ತು. ಈ ಪ್ರಬಂಧದ ನಾಯಕಿಯಾದ ಸಂಚಿಯ ಹೊನ್ನಮ್ಮನೂ ಸಹ ಈ ಕವಯಿತ್ರಿಗಳಲ್ಲಿ ಒಬ್ಬಳಾಗಿದ್ದಳು.

ಚಿಕ್ಕದೇವರಾಜ ಒಡೆಯರ ಪಟ್ಟದರಸಿ ದೇವಾಜಮ್ಮಣ್ಣಿಯ ತೌರೂರು ಎಳಂದೂರು. ಹೊನ್ನಮ್ಮನ ತಾಯಿ ಕೆಂಪಮ್ಮನು ದೇವಾಜಮ್ಮಣ್ಣಿಯ ತಾಯಿ ಚೆಲುವಾಂಬೆಯನ್ನು ಓಲೈಸಿಕೊಂಡಿದ್ದಳು. ತಂದೆ ಮಾದಪ್ಪನು ರಾಜದಳದಲ್ಲಿ ಸೇರಿದ್ದನು. ಕೆಂಪಮ್ಮನು ಸ್ವಯಂ ಅಕ್ಷರಸ್ಥಳಲ್ಲದಿದ್ದರೂ, ಸುಸಂಸ್ಕೃಳೂ ಪತಿವ್ರತಾ ಶಿರೋಮಣಿಯೂ ಆಗಿದ್ದಳು. ಆಗಿನ ಜನಪ್ರಿಯವಾದ ಯಕ್ಷಗಾನವನ್ನು ತಪ್ಪದೆ ಕೇಳುತ್ತಿದ್ದಳು. ಬಯಲು ನಾಟಕಗಳು ರಂಗಭೂಮಿಯ ಮೇಲೆ ಅಭಿನಯಿಸಲ್ಪಟ್ಟರೆ, ಮಾದಪ್ಪನು ತಪ್ಪದೆ ಹೆಂಡತಿಯನ್ನು ಕರೆದೊಯ್ಯುತ್ತಿದ್ದನು. ಹೀಗಾಗಿ, ಕೆಂಪಮ್ಮನು ಇವುಗಳ ಬಹುಭಾಗಗಳನ್ನು ಮನನ ಮಾಡಿಕೊಂಡಿದ್ದಳು. ಮನೆಗೆಲಸವನ್ನು ಮಾಡುವಾಗ ಇವುಗಳನ್ನು ಪಠನ ಮಾಡಿಕೊಳ್ಳುತ್ತಿದ್ದಳು. 'ತಾಯಿಯಂತೆ ಮಕ್ಕಳು, ಭೂಮಿಯಂತೆ ಬೆಳೆ' ಎಂಬ ನಾಣ್ಣುಡಿಯಂತೆ, ಕೆಂಪಮ್ಮನಂತಹ ಸಾಧ್ವಿಯ ಏಕಮಾತ್ರ ಪುತ್ರಿಯಾದ ಹೊನ್ನಮ್ಮನು ಕನ್ನಡ ಜಾಣೆಯಾಗಿ, ಸರಸ ಸಾಹಿತ್ಯದ ವರದೇವತೆಯಾಗಿ ಬೆಳಗಿದ್ದು ಏನೂ ಆಶ್ಚರ್ಯವಿಲ್ಲ.

ಹೊನ್ನಮ್ಮನು ದೇವಾಜಮ್ಮಣ್ಣಿಗಿಂತ ನಾಲ್ಕು ವರ್ಷಗಳಿಂದ ಕಿರಿಯಳು. ಮತ, ಅಂತಸ್ತಿನ ಭೇದಗಳಿಲ್ಲದೆ ಇವರು ಬಾಲಕಿಯರಾಗಿದ್ದಾಗ

ಒಟ್ಟೊಟ್ಟಿಗೆ ಇರುತ್ತಿದ್ದರು. ಊಟ, ಆಟ ಮತ್ತು ಪ್ರವಚನಗಳ ಸಮಯ ದಲ್ಲಿಯೂ ಇವರಿಬ್ಬರೂ ಒಬ್ಬರನ್ನೊಬ್ಬರು ಅಗಲದೆ ಇರುತ್ತಿದ್ದರು. ದೇವಾಜಮ್ಮಣ್ಣಿಯ ವಿದ್ಯಾಭ್ಯಾಸವು ಆಳಸಿಂಗ್ರಾಚಾರ್ಯರ ಬಳಿ ಮೊದಲಾ ಯಿತು. ವ್ಯಾಸಂಗದ ವೇಳೆಯಲ್ಲಿಯೂ ಸಹ ಈ ಒಡನಾಡಿಗಳು ಅಗಲು ತ್ತಿರಲಿಲ್ಲ. ದೇವಾಜಮ್ಮಣ್ಣಿಯು ಗುರುಗಳ ಬಳಿ ಕುಳಿತು ಪಾಠಗಳನ್ನು ಕಲಿ ಯುತ್ತಿರುವ ವೇಳೆಯಲ್ಲಿ, ಹೊನ್ನಮ್ಮನೂ ಸಹ ಬಳಿಯಲ್ಲಿಯೇ ಕುಳಿತಿರು ತ್ತಿದ್ದಳು. ಸ್ವಭಾವತಃ ಚುರುಕುಬುದ್ಧಿಯುಳ್ಳ ಈ ಕನ್ಯೆಗೆ ಓದುವುದೂ, ಬರೆಯುವುದೂ ಬರದಿದ್ದರೂ, ಪಾಠಗಳೆಲ್ಲಾ ಮನನವಾಗಿದ್ದವು. ಸಂಚಿಯ ಊಳಿಗದವಳ ಪುತ್ರಿಗೆ ಓದುಬರೆಹವು ಅಗತ್ಯವೆಂದು ಯಾರಿಗೂ ಎನಿಸಲಿಲ್ಲ ವಾಗಿ ಅವಳ ವಿದ್ಯಾಭ್ಯಾಸವು ಜರುಗಲಿಲ್ಲ.

ದೇವಾಜಮ್ಮಣ್ಣಿಯು ವಿವಾಹವಾದನಂತರ ಶ್ರೀರಂಗಪಟ್ಟಣಕ್ಕೆ ಬಂದು ರಾಣಿವಾಸದಲ್ಲಿ ನೆಲಸಿದಳು. ಇದರಿಂದ ಸಖಿಯರಿಗೆ ವಿಯೋಗ ಉಂಟಾಯಿತು. ಅರಮನೆಯಲ್ಲಿ ರಾಣಿಗೆ ಸಲ್ಲಿಸುತ್ತಿದ್ದ ಅನೇಕ ಗೌಡಿತಿಯರ ಸೇವೆಯು ರುಚಿಸ ದಾಯಿತು. ಈ ಕೊರತೆಯನ್ನು ತನ್ನ ಪತಿಯಲ್ಲಿ ಅರಿಕೆಮಾಡಿಕೊಂಡು ಆತನ ಅನುಜ್ಞೆ ಪಡೆದು ಹೊನ್ನಮ್ಮನನ್ನು ಬರಮಾಡಿಕೊಂಡಳು. ಮತ್ತು ಆಕೆಯನ್ನು ತನ್ನ ಸಂಚಿಯ ಊಳಿಗದವಳಾಗಿ ನೇಮಿಸಿಕೊಂಡಳು. ಈ ವೇಳೆಗೆ ಹೊನ್ನಮ್ಮನ ಬುದ್ಧಿ ವಿಕಸಿತವಾಗಿತ್ತು. ಸಣ್ಣ ಹಾಡು (ಪದ)ಗಳನ್ನು ಕಟ್ಟುವ ಅರ್ಹತೆಯನ್ನು ಪಡೆದಿದ್ದಳು. ಅರಮನೆಯಲ್ಲಿ ನಡೆಯುತ್ತಿದ್ದ ದೇವತಾರ್ಚನೆ ಮತ್ತಿತರ ಸಮಾರಂಭಗಳಲ್ಲಿ ತಾನು ಕಟ್ಟಿದ ಹಾಡುಗಳನ್ನು ಹಾಡಿ ರಾಜಮನೆತನದವರಿಗೆಲ್ಲ ಮನರಂಜನೆಯನ್ನುಂಟು ಮಾಡುತ್ತಿದ್ದಳು. ಈ ಗೀತೆಗಳನ್ನು ಕೇಳಿದ ಅರಸನೂ ಸಹ ಅವುಗಳ ಶೈಲಿ, ಭಾವ, ಅರ್ಥಗಳಿಗೆ ತಲೆದೂಗುತ್ತಿದ್ದನು. ರಾಜದಂಪತಿಗಳು ಹೊನ್ನಮ್ಮನ ಪ್ರತಿಭೆಯನ್ನು ಮೆಚ್ಚಿ, ಆಕೆಯ ಭವಿಷ್ಯ ಚಿಂತೆಮಾಡಿ ವಿದ್ಯಾಭ್ಯಾಸ ಮಾಡಿಸಬೇಕೆಂಬ ಕುತೂಹಲವನ್ನು ಹೊಂದಿದರು.

ಹೊನ್ನಮ್ಮನ ವಿದ್ಯಾಭ್ಯಾಸವು ಕ್ರಮವಾಗಿ ಆಕೆಯ ಹದಿನೈದನೆಯ ವಯಸ್ಸಿನಲ್ಲಿ ಆರಂಭವಾಯಿತು. ಆಸ್ಥಾನದ ಕವಿಗಳಲ್ಲಿ ಒಬ್ಬರಾದ ಆಳಸಿಂಗ್ರಾಚಾರ್ಯರು ಆಕೆಯ ಗುರುಗಳಾಗಿ ನೇಮಿಸಲ್ಪಟ್ಟರು. ಇವರ

ಸಮ್ಮುಖದಲ್ಲಿ ಆಕೆಗೆ ಕನ್ನಡ, ಸಂಸ್ಕೃತ ಮತ್ತು ಸಾಹಿತ್ಯದ ಪಾಠಗಳು ನಡೆದವು. ಇದರ ಪರಿಣಾಮವಾಗಿ, ಸ್ವಯಂಪ್ರಭೆಯಾದ ಹೊನ್ನಮ್ಮನು ವಿದ್ಯಾವತಿಯಾಗಿ,'ಕಬ್ಬಿಣವು ಚಿಂಬೊನ್ನಾದಂತೆ,'ಪೂರ್ಣಪಂಡಿತೆಯಾದಳು.

ಅರಮನೆಯ ಚಿತ್ರಕಾರ ಕೆಂಚನಾರಾಯಣನು ಹೊನ್ನಮ್ಮನ ಗೀತೆಗಳನ್ನು ಕೇಳಿ ಮನಮೆಚ್ಚಿಕೊಂಡವರಲ್ಲೊಬ್ಬನು. ಈಕೆಯನ್ನು ತನ್ನ ಬಾಳಗೆಳತಿಯಾಗಿ ಪಡೆದು ಧನ್ಯನಾಗಬೇಕೆಂದು ಕೆಂಚನಾರಾಯಣನು ಹಾತೊರೆಯುತ್ತಿದ್ದನು. ಒಂದು ದಿನ ಹೊನ್ನಮ್ಮನ ಭಾವಚಿತ್ರವನ್ನು ಅರಮನೆಯ ಉದ್ಯಾನವನದಲ್ಲಿದ್ದ ಒಂದು ಕಲ್ಲುಚಪ್ಪಡಿಯ ಮೇಲೆ ರಚಿಸಿದ್ದನು. ಇತರ ಸಖಿಯರ ಮೂಲಕ ಈ ವಿಷಯವು ರಾಣಿಗೆ ತಿಳಿದು, ಆಕೆಯು ಅರಸನ ಕಿವಿಗೆ ಮುಟ್ಟಿಸಿದಳು. ಚಿತ್ರಕಾರನನ್ನು ಬರಮಾಡಿಕೊಂಡು ಅರಸನು ಅವನನ್ನು ಮಾತನಾಡಿಸಿ, ಅವನ ರೂಪು, ಯೌವನ ಮತ್ತು ಗುಣದಲ್ಲಿ ಹೊನ್ನಮ್ಮನಿಗೆ ತಕ್ಕವನೆಂದು ತೀರ್ಮಾನಿಸಿಕೊಂಡನು. ಹದಿನಾರನೆಯ ವಯಸ್ಸು ತುಂಬಿದ ಕೂಡಲೇ ಹೊನ್ನಮ್ಮನ ವಿವಾಹವು ಕೆಂಚನಾರಾಯಣನೊಂದಿಗೆ ನೆರವೇರಿತು. ಗೃಹಸ್ಥಾಶ್ರಮದಲ್ಲಿ ಪ್ರವೇಶಿಸಿದ ಹೊನ್ನಮ್ಮನು ತನ್ನ ಹೊಣೆಯನ್ನು ಸುಗಮವಾಗಿ ಪ್ರವಹಿಸಿದಳು.

ರಾಣಿವಾಸದಲ್ಲಿನ ಅನೇಕ ಹೆಣ್ಣು ಊಳಿಗದವರು ಗೃಹಸ್ಥೆಯರಿದ್ದರು. ಇವರುಗಳು ಅನೇಕ ಬಾರಿ ರಾಣಿಯಲ್ಲಿ ತಮ್ಮ ಸಂಸಾರದ ಸಂಕಟವನ್ನು ತೋಡಿಕೊಂಡು ಕಣ್ಣೀರಿಡುತ್ತಿದ್ದರು. ಕೆಲವರು ಪತಿಯ ದುರುಳತನವನ್ನು ಅವಹೇಳನ ಮಾಡಿ ಜರೆದು ಅಳುತ್ತಿದ್ದರು. ಮತ್ತೆ ಕೆಲವರು ಅತ್ತೆ, ಮಾವ, ಮೈದುಂದಿರ ನಿಷ್ಠುರ ವರ್ತನೆಗಳನ್ನು ಕಟುವಾಗಿ ಟೀಕಿಸಿ ಮರುಗುತ್ತಿದ್ದರು. ತುಂಬು ಸಂಸಾರದಲ್ಲಿದ್ದರೂ ಸಹ ಹೊನ್ನಮ್ಮನು ಅತ್ತೆ ಮಾವಂದಿರ ಸೇವೆ ಮಾಡಿ, ಪತಿಯ ಒಲವನ್ನು ಪಡೆದುಕೊಂಡು ಸದಾ ಹಸನ್ಮುಖಿಯಾಗಿ ಬಾಳುತ್ತಿದ್ದ ಹೊನ್ನಮ್ಮನನ್ನು ಕಂಡು ಅರಸಿಯು ದಿಙ್ಮೂಢಳಾಗುತ್ತಿದ್ದಳು. ಸಂಸಾರದಲ್ಲಿನ ಈ ವ್ಯವಧಾನವನ್ನು ಅನುಭವಿಸುವ ತಂತ್ರವೇನೆಂದು ರಾಣಿಯು ಹೊನ್ನಮ್ಮನನ್ನು ಪ್ರಶ್ನಿಸಿದಳು. ಆಗ ಹೊನ್ನಮ್ಮನು, ಮಹಾಭಾರತದ ವನಪರ್ವದಲ್ಲಿ ಉಲ್ಲೇಖಿಸಿರುವ ದ್ರೌಪದೀ-ಸತ್ಯಭಾಮಾ ಸಂವಾದದಲ್ಲಿ, ದ್ರೌಪದಿಯು ಭಾಮೆಗೆ ಬೋಧಿಸಿದ ಪತೀವಶೀಕರಣ ವಿಧಾನವನ್ನು

ಅನುಮೋದಿಸುತ್ತಿರುವುದೇ ತನ್ನ ತಂತ್ರವೆಂದಳು. ಈ ವಿಷಯುವನ್ನು ರಾಣಿಯು ಅರಸನಿಗೆ ತಿಳಿಸಿದಳು. ಆತನು ಹೊನ್ನಮ್ಮನನ್ನು ಕರೆಸಿ, ಆರ್ಯ ಸ್ತ್ರೀಯರನ್ನು ಉದ್ಧಾರಮಾಡಲು ಮಾರ್ಗದರ್ಶಕವಾದ ಒಂದು ಕಾವ್ಯವನ್ನು ರಚಿಸಬೇಕೆಂದು ಪ್ರೋತ್ಸಾಹಿಸಿದನು.

ರಾಜಾಶ್ರಯದಲ್ಲಿ ಬಾಲ್ಯದಿಂದಲೂ ಬೆಳೆದು, ರಾಜದಂಪತಿಗಳ ಒಲವನ್ನು ಅನುಭವಿಸುತ್ತಿದ್ದರೂ ಹೊನ್ನಮ್ಮನು ರಾಜಮನೆತನದ ಠೀವಿ, ಶೃಂಗಾರ ಜೀವನ, ಸಾಹಸ ಕಾರ್ಯಗಳನ್ನು ತನ್ನ ಕಾವ್ಯಕ್ಕೆ 'ವಸ್ತು'ವಾಗಿ ಆರಿಸಿಕೊಳ್ಳಲಿಲ್ಲ. ಆರ್ಯಾವರ್ತದ ಸ್ತ್ರೀಯರ ಧ್ಯೇಯವನ್ನೇ ವಸ್ತುವನ್ನಾಗಿ ಮಾಡಿಕೊಂಡು, ಕಾವ್ಯವನ್ನು ರಚಿಸಿದಳು. ಮನೆಮಕ್ಕಳ, ಗಂಡಹೆಂಡಿರ ಗೃಹಸ್ಥಾಶ್ರಮಧರ್ಮದ ಬಾಳಿನ ಚೆಲುವನ್ನು ಹಾಡಿ, ನಿತ್ಯ ಸಂಸಾರದಲ್ಲಿ ಸ್ತ್ರೀಯು ನಡೆಸುವ ನಿಷ್ಕಾಮ ಕರ್ಮವೇ ಭಗವಂತನ ಪಾದವನ್ನು ಸೇರುವ ಏಕ ಮಾರ್ಗವೆಂದು ತೋರಿಸಿಕೊಟ್ಟಳು.

' ಹದಿಬದೆಯ ಧರ್ಮ 'ವೆಂಬುದೇ ಈ ಕಾವ್ಯದ ನಾಮ, ಈ ಕಾವ್ಯವು ಹೆಣ್ಣುಮಕ್ಕಳು ಸುಲಭ ದಾಟಿಯಲ್ಲಿ ಹಾಡುವಂತೆ, ಸಾಂಗತ್ಯ ರೂಪದಲ್ಲಿ ವಿರಚಿತವಾಗಿದೆ. ಈ ಕಾವ್ಯದ ಆರಂಭದಲ್ಲಿ ಧರ್ಮ ಸೂಕ್ಷ್ಮವನ್ನೂ, ವಿಶಿಷ್ಟಾದ್ವೈತ ನಿಷ್ಠೆಯನ್ನೂ ಸಮರ್ಪಕವಾಗಿ ವಿವರಿಸಿ, ರಸಗಂಗೆಯನ್ನು ಹರಿಸುವುದರಲ್ಲಿ, ಸಂಸ್ಕೃತ ಪ್ರೌಢಿಮೆಯನ್ನು ಬೀರಿದ್ದಾಳೆ. ಈ ಕಾವ್ಯದಲ್ಲಿ ಒಟ್ಟು ಒಂಭತ್ತು ಸಂಧಿಗಳೂ, ನಾನೂರ ಎಂಭತ್ತು ಪದ್ಯಗಳೂ ಇವೆ. ಪತಿವ್ರತಾ ಧರ್ಮದ ಮಹಿಮೆ, ಅತ್ತೆ, ಮಾವ, ಭಾವಂದಿರು ಮೊದಲಾದವರನ್ನು ಓಲೈಸುವ ರೀತಿ, ಪತಿಯ ಒಲವನ್ನು ಅರಿತು ಬಾಳುವ ರೀತಿ, ಸಂಸಾರ ಸುಖದ ಸಾರ, ಇವುಗಳು ಮೂರ್ತಿವತ್ತಾಗಿ ವಿವರಿಸಲ್ಪಟ್ಟಿವೆ. ಇದಲ್ಲದೆ, ಗೃಹಸ್ಥಾಶ್ರಮ ಜೀವನದಲ್ಲಿ ಸ್ತ್ರೀಯ ಸ್ಥಾನ, ಜನರು ಸ್ತ್ರೀಯನ್ನು ಕಾಣಬೇಕಾದ ರೀತಿ, ಈ ತತ್ವಗಳು ರಸವತ್ತಾಗಿ ನಿರೂಪಿಸಲ್ಪಟ್ಟಿವೆ.

" ಕಾವ್ಯದ ಮೊದಲಲ್ಲಿ ಶ್ರೀರಂಗಧಾಮನ ಪ್ರಾರ್ಥನೆಮಾಡಿ, ಆರ್ಯ ಮನುಧರ್ಮಶಾಸ್ತ್ರ, ಆರ್ಷ, ಪುರಾಣ ಯುಗಗಳಲ್ಲಿ ವಿದಿತವಾಗಿರುವ ತತ್ವವನ್ನೂ, ಮಹನೀಯರ ವಚನವನ್ನೂ ಕಾವ್ಯರೂಪದಲ್ಲಿ ಹಾಡುತ್ತೇನೆಂದು," ಹೇಳಿಕೊಂಡಿದ್ದಾಳೆ. ಈಕೆಯು ಕಾವ್ಯದಲ್ಲಿ ವರ್ಣಿಸಿರುವ ರಾಜಸ್ತುತಿಯೂ

ಸಹ ಸಮಂಜಸವಾಗಿಯೂ, ಮುದ್ದಾಗಿಯೂ ಇದೆ. ಕಾವ್ಯವನ್ನು ಬರೆದು ಪೂರೈಸಿದನಂತರ, ಆದನ್ನು ತನ್ನ ಗುರುವಿನ ಪದತಲದಲ್ಲಿ ಸಮರ್ಪಿಸಿದಳು. ಗುರು, ಆಳಸಿಂಗ್ರಾಚಾರ್ಯರು ಅದನ್ನು ಓದಿ ತನ್ಮಯರಾದರು. ಇದು ರಾಜನ ಸಮ್ಮುಖದಲ್ಲಿ ಓದಲ್ಪಡಲು ಯೋಗ್ಯವಾಗಿದೆಯೆಂದು ಅರಸನಲ್ಲಿ ಬಿನ್ನಯಿಸಿ ಕೊಂಡರು. ರಾಜಾಸ್ಥಾನದಲ್ಲಿ ಕಾವ್ಯವನ್ನು ಓದಬೇಕೆಂದು, ಹೊನ್ನಮ್ಮನಿಗೆ ಅಣತಿ ಬಂದಿತು. ಭಯ ಸಂಕೋಚಗಳಿಂದ ಹೊನ್ನಮ್ಮನು ಹಣ್ಣಾದಳು.

ರಾಜಾಸ್ಥಾನದಲ್ಲಿಯಾದರೋ, ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಸಿಂಗರಾಯ, ಶೃಂಗಾರಮ್ಮ ಮತ್ತು ಇತರ ವಿದ್ವನ್ಮಣಿಗಳು ನೆರೆದಿದ್ದರು. ಹೊನ್ನಮ್ಮನು ಸಭೆಯಲ್ಲಿ ಕಾವ್ಯವನ್ನು ಹಿಡಿದು ಕಂಪಿಸುತ್ತಾ ತಲೆ ತಗ್ಗಿಸಿ ನಿಂತಳು. ಆಗ, ತಾಯಿಯಂತಿರುವ ರಾಣಿಯು ' ಬಾ ಹೊನ್ನಿ ' ಎಂದು ಕೈ ಹಿಡಿದು, ಕರೆದು, ಕಾವ್ಯವನ್ನು ಓದುವಂತೆ ಪ್ರೋತ್ಸಾಹಿಸಿದಳು. ಹೊನ್ನಮ್ಮನು ಮಾಡಿದ ರಾಜಸ್ತುತಿಯು ಎಷ್ಟು ಸೂಕ್ತವಾಗಿದ್ದಿತೆಂದು ಕೆಳಗಿನ ಪದ್ಯದಿಂದ ತಿಳಿದುಬರುತ್ತದೆ :—

" ಅರಸ ಕೇಳನಗೆ ನಿನ್ನಡಿ ಯೂಳಿಗ ಮೊಂ
ದರಸಿ ಯರಡಿಯೊಲ್ಮೆಯೊಂದು
ಪರಕಿಪೊಡಖಿಳಾರ್ಥ ಸಾಧನಂಗಳಿಗಿವು
ನೆರವಾಗಿಹವು ನೇಮದೊಳು ||"

ಹೀಗೆ ಉದ್ದಕ್ಕೂ ಸರಳವಾದ ಪದ್ಯರಚನೆಯಿಂದ ತುಂಬಿದ ಕಾವ್ಯವನ್ನು ಓದುತ್ತಿದ್ದಂತೆ ಅದರಲ್ಲಿ ಕಂಡುಬಂದ ವಿಚಾರಪೂರ್ಣವಾದ ತತ್ವ, ಬಿಡುನುಡಿಗಳ ಅಂದವಾದ ಹೊಂದಾವಣೆ, ಸರಳ ಶೈಲಿ ಇವುಗಳನ್ನು ಕೇಳಿ ಸಭಿಕರು ರೋಮಾಂಚಿತರಾದರು.

" ಕಾವ್ಯದಲ್ಲಿ ಕಂಡುಬರುವ ಹೆಣ್ಣು ಓದುಗರ ಮುಂದೆ ಪ್ರಬಲಿಸಿ ಮುಗ್ಧ ಬದುಕನ್ನು ಕಳೆಯುತ್ತಾಳೆ. ತಾನು ಹುಟ್ಟಿ ಬೆಳೆದ ತೌರೂರಿನ ಆಕಾಂಕ್ಷೆ, ರೀತಿ ಇವುಗಳನ್ನೆಲ್ಲಾ ಮರೆತು, ತನ್ನ ಅತ್ತೆಯ ಮನೆಯ ಅಭಿರುಚಿಗೆ ತಕ್ಕಂತೆ ತನ್ನ ಶರೀರ ಮತ್ತು ಮನಸ್ಸನ್ನು ಹೊಂದಿಸಿಕೊಳ್ಳುತ್ತಾಳೆ.

ಪತಿಯ ಒಲವ (ಪ್ರೀತಿ) ನ್ನು ಪಡೆಯಲು ಉತ್ಸುಕತೆಯಿಂದ ಸರ್ವ ಪ್ರಯತ್ನ ನಡೆಸುತ್ತಾಳೆ. 'ಆವಪರಿಯದೇಸಿ ಆಣ್ಮಗೆ ಬಗೆವರ್ಪುದು' ಎಂದಾಲೋಚಿಸಿ, ಅಂತಹ ಉಡಿಗೆತೊಡಿಗೆಗಳನ್ನು ಆರಿಸಿ, ಸಿಂಗರಿಸಿಕೊಂಡು ಕಾಂತನನ್ನು ಸ್ವಾಗತಿಸಿ, ಉಪಚರಿಸುತ್ತಾಳೆ" ಇಲ್ಲಿಗೆ, ಕಾವ್ಯದ ಒಂದು ಮೆಟ್ಟಲು ಮುಗಿಯುತ್ತದೆ.

ಬಳಿಕ ಸಂಸಾರದಲ್ಲಿ ಅನೇಕ ತಾಪತ್ರಯಗಳು ತಲೆದೋರುತ್ತವೆ. ಇದರಿಂದ ಪತಿಯು ಅಕಾರಣವಾಗಿ ಸಿಟ್ಟಿಗೇಳುತ್ತಾನೆ. ಆದರೂ, ಸತಿಯು ಧೈರ್ಯಗುಂದದೆ ಸಿಟ್ಟನ್ನು ಸಹಿಸಿಕೊಂಡು, ಮಕ್ಕಳನ್ನು ವಾತ್ಸಲ್ಯದಿಂದ ಸಲಹುತ್ತಾಳೆ; ಮತ್ತು ಪತಿಯ ಬಂಧುಗಳನ್ನು ನಿರ್ವಂಚನೆಯಿಂದ ಸತ್ಕರಿಸುತ್ತಾಳೆ. ಕಾಲಕ್ರಮೇಣ, ಆಕೆಯು ಮನೆ ಒಡತಿಯಾಗಿ, ದಾರಿತಪ್ಪಿ ನಡೆಯುವ ಮಕ್ಕಳನ್ನು ನಿಷ್ಠುರತೆಯನ್ನನುಭವಿಸಿ, ನ್ಯಾಯವಾಗಿ ಶಿಕ್ಷಿಸುತ್ತಾಳೆ.

ಒಂದೊಂದು ಸಮಯದಲ್ಲಿ, ಪತಿಯು ಕಾರ್ಯಾಂತರದಿಂದ, ದೇಶಾಂತರ ಹೋಗಿದ್ದಾಗ ಗೃಹಿಣಿಯು ಮನಗುಂದಿದವಳಾಗಿ, ಪರಿತಪಿಸುತ್ತಾಳೆ. ಇದನ್ನು ಹೊನ್ನಮ್ಮನು ಬಹಳ ಚೆನ್ನಾಗಿ ಸೃಷ್ಟಿಸಿದ್ದಾಳೆ. ವಿರಹಿಣಿಯ ಮನೆ ಮತ್ತು ಮನಸ್ಸು ಶೂನ್ಯವಾಗಿರುತ್ತದೆ; ಆದ್ದರಿಂದ ಆಕೆಗೆ ಆಹಾರ ಸೇವನೆಯಲ್ಲಿಯೂ ಸಿಂಗರಿಸಿಕೊಳ್ಳುವುದರಲ್ಲಿಯೂ ಆಸಕ್ತಿಯಿಲ್ಲ. ಪತಿಯ ಪಾದಸ್ಮರಣೆಯಲ್ಲಿಯೇ ಹಗಲನ್ನೂ, ರಾತ್ರಿಯನ್ನೂ ಕಳೆಯುತ್ತಾಳೆ. ಬಳಿಕ, ಪತಿಯಾಗಮನದ ಸುದ್ದಿ ಕೇಳಿದೊಡನೆ ಆಕೆಯ ದುಃಖದ ಕಟ್ಟೆಯು ಒಡೆಯುತ್ತದೆ." ಈ ಭಾಗವನ್ನು ಓದಿದರೆ, ಅಶೋಕವನದಲ್ಲಿ ದುಃಖಸಾಗರದಲ್ಲಿ ಮುಳುಗಿದ್ದ ಸೀತೆಯ ಪರಿಸ್ಥಿತಿಯನ್ನು ಓದುಗರ ಮನಸ್ಸಿನಲ್ಲಿ ನೆನಪಿಗೆ ತರುತ್ತದೆ.

ತರುವಾಯ, ನಡುಪ್ರಾಯವನ್ನು ಸಮೀಪಿಸಿದ ಕೂಡಲೆ ಗೃಹಿಣಿಗೆ ಭಗವನ್ನಾಮಸಂಕೀರ್ತನೆ, ದಾನಧರ್ಮ ಕಾರ್ಯಗಳ ಕಡೆಗೆ ಗಮನ, ಮೋಕ್ಷ ಸಾಧನೆಯ ಆಕಾಂಕ್ಷೆ ಇವುಗಳ ಕಡೆ ಮನಸ್ಸು ಹರಿಯುತ್ತದೆ. ಈ ಸಂದರ್ಭದಲ್ಲಿಯೂ, 'ಪತಿಭಕ್ತಿಯೊಂದು ಶ್ರೀಪತಿ ಭಕ್ತಿಯೊಂದಿದರತಿಶಯ ಕಿನ್ನೆಣೆಯಿಲ್ಲ' ಎಂಬ ತತ್ವವನ್ನು ಮರೆಯದೆ ಸತಿಯು ತನ್ನ ಪತಿಯ ಹಿತಚಿಂತಕಳಾಗಿ ಸೇವಿಸುತ್ತಾಳೆ.

ಒಟ್ಟಿನಲ್ಲಿ ಕಾವ್ಯದಲ್ಲಿ ಸ್ತ್ರೀಧರ್ಮ ಗೀತೆಯೇ ತುಂಬಿದೆ. ಮತ್ತೊಂದು ಕಡೆ ಹೆಣ್ಣಿನ ವೈಶಿಷ್ಟ್ಯವನ್ನು ಟೀಕಿಸುತ್ತಾ

" ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ ।
ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದವಳು ।
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ।
ಕಣ್ಣು ಕಾಣದ ಗಾವಿಲರು ॥"

ಎಂದು ಬರೆದಿದ್ದಾಳೆ.

ಮತ್ತೊಂದು ಪದ್ಯದಲ್ಲಿ, ಹೆಣ್ಣಿನ ಬೆಲೆ ಕಟ್ಟುತ್ತಾ

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು ?
ಇವರೀರ್ವರೊಳೇಳ್ಗೆ ಪಡೆದವರಿಂದ
ಸವನಿಪುದಿಹಪರಸೌಖ್ಯ ॥

ಎಂದು ಹೇಳುತ್ತಾಳೆ. ಆಗ ಹೆಣ್ಣುಮಕ್ಕಳು ಹುಟ್ಟಿತೆಂದ ಕೂಡಲೆ ತಿರಸ್ಕಾರ ದೃಷ್ಟಿಯಿಂದ ನೋಡುವ ತಂಪೆ, ಇತರ ಪುರುಷರು ಹೆಣ್ಣುಮಕ್ಕಳನ್ನು ಆದರ ದಿಂದ ಕಾಣಬೇಕೆಂದು ಹೇಳುವ ಬುದ್ಧಿಮಾತಾಗಿದೆ.

ಹೀಗೆ, ಗೃಹಸ್ಥಾಶ್ರಮದ ಧರ್ಮ, ಸುಖದಾಂಪತ್ಯ ಜೀವನ ದಿನಚರಿಯು ಕಾರ್ಯತತ್ಪರತೆ ಮತ್ತು ನಿದರ್ಶನಗಳು ಒಂದಲ್ಲ ಒಂದು ರೂಪದಲ್ಲಿ ಒಂಭತ್ತು ಸಂಧಿಗಳಲ್ಲಿಯೂ ರಸವತ್ತಾಗಿ ವರ್ಣಿಸಲ್ಪಟ್ಟಿರುವುದನ್ನು ಸಭಿಕರುಕೇಳಿ ಆನಂದ ಬಾಷ್ಪಗಳನ್ನು ಸುರಿಸಿ, ಹೊನ್ನಮ್ಮನು ಆಸ್ಥಾನದ ಕವಿ ಕಬ್ಬಗಿತಿಯರ ಶ್ರೇಣಿ ಯಲ್ಲಿ ಸೇರಿಸಲ್ಪಡಲು ಅರ್ಹಳೆಂದು ತೀರ್ಮಾನಿಸಿದರು.

ಹೊನ್ನಮ್ಮನು ಈ ಕಾವ್ಯವನ್ನು ಸ್ತ್ರೀಯರ ಮೇಲ್ಮೆಗಾಗಿ ಬರೆದಿದ್ದರೂ ತಾನು ಜೀವನದಲ್ಲಿ ಆ ತತ್ವವನ್ನು ಅನುಸರಿಸುತ್ತಿದ್ದಳು. ತನ್ನ ಐವರು ಮಕ್ಕಳನ್ನು ಆದರ್ಶಮಾತೆಯಂತೆ ಪಾಲಿಸಿದಳು. ಸ್ತ್ರೀರತ್ನದಂತಿದ್ದ ಈಕೆಯು ತನ್ನ ನಲವತ್ತಾರನೆಯ ವಯಸ್ಸಿನಲ್ಲಿ ಉದರರೋಗ ಪೀಡಿತಳಾಗಿ ಹಾಸಿಗೆ

ಹಿಡಿದಳು. ಅದೊಂದು ದಿನ, ತಾನು ಬದುಕುವುದು ಅಸಂಭವವೆಂದು ಖಚಿತ ಮಾಡಿಕೊಂಡು ರಾಜದಂಪತಿಗಳನ್ನು ಬರಮಾಡಿಕೊಂಡು ಅವರ ಚರಣ ಧೂಳಿಯನ್ನು ಶಿರದಲ್ಲಿ ಧಾರಣೆ ಮಾಡಿಕೊಂಡಳು. ಬಳಿಕ, ಪತಿಯ ಪಾದ ಗಳಲ್ಲಿ ಮಸ್ತಕವನ್ನಿರಿಸಿ, ಇಹಬಂಧನದಿಂದ ಮುಕ್ತಳಾಗಿ ಕಣ್ಮುಚ್ಚಿದಳು. ಈಕೆಯು ಸತ್ತು ಎಷ್ಟೇ ವರ್ಷಗಳಾಗಿದ್ದರೂ ಸಹ ಆಕೆಯ ಆತ್ಮಜ್ಯೋತಿಯು ಆಚಂದ್ರಾರ್ಕಪರ್ಯಂತವೂ ಪ್ರತಿಯೊಬ್ಬ ಆರ್ಯ ಮಹಿಳೆಯ ಆತ್ಮದಲ್ಲಿ ಪ್ರಜ್ವಲಿಸುತ್ತಿರುವುದೆಂಬುದು ಸತ್ಯವಾಗಿದೆ.

## ಪ್ರಶ್ನೆಗಳು

೧. 'ಹೊನ್ನಮ್ಮನು ಹುಟ್ಟಿನಲ್ಲಿ ಸಾಂಸ್ಕೃತಿಕ ವ್ಯಕ್ತಿ,' ಹೇಗೆ ?

೨. ಹೊನ್ನಮ್ಮನ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಸಿಕ್ಕಿದ ರೀತಿಯನ್ನು ತಿಳಿಸಿ.

೩. ಹೊನ್ನಮ್ಮನ ' ಹದಿಬದೆಯ ಧರ್ಮ 'ದ ಸಾರವನ್ನು ಬರೆಯಿರಿ.

೪. ' ಹದಿಬದೆಯ ಧರ್ಮ 'ದಲ್ಲಿ ಕಾಣುವ ಧರ್ಮಸೂಕ್ಷ್ಮವು ಆಧುನಿಕ ಮಹಿಳೆಯರ ಜೀವನಕ್ಕೆ ಸರಿಬರುತ್ತದೆಯೇ ? ಚರ್ಚಿಸಿ.

# ಚಿರದುಃಖಿನಿ

ನಮ್ಮ ನಾಡಿನ ಪುರಾಣ ಗ್ರಂಥಗಳಲ್ಲೆಲ್ಲಾ ಅತ್ಯಂತ ಜನಪ್ರಿಯವಾದ ಕಾವ್ಯವೆಂದರೆ ' ಮಹಾಭಾರತ '. ಇದಕ್ಕೆ ಕಾರಣ, ಕುತೂಹಲವನ್ನು ಕೆರಳಿಸಿ ಮನಸ್ಸಿಗೆ ತೃಪ್ತಿಯನ್ನುಂಟು ಮಾಡುವ ಭಾರತದ ಕಥಾವಸ್ತು. ಉತ್ತಮವಾದ ವರ್ಣನೆ, ಹೃದಯವನ್ನು ಕಲಕುವ ಅನೇಕ ಉದಾತ್ತ ಪಾತ್ರಗಳ ನಿರೂಪಣೆ, ನವರಸ ಭರಿತವಾದ ಸನ್ನಿವೇಶಗಳು ಇವುಗಳಿಂದ ನಿಬಿಡವಾದ ಈ ಕಾವ್ಯವು ಐದನೆಯ ವೇದವೆಂದು ಪ್ರಸಿದ್ಧಿಗೊಂಡಿದೆ. ಒಂದು ಕಡೆ ಕೃಷ್ಣನ ಚಮತ್ಕಾರ ಮತ್ತು ಮಹಿಮೆ, ಮತ್ತೊಂದು ಕಡೆ ವೀರಅಭಿಮನ್ಯುವಿನ ಶೌರ್ಯ, ಇನ್ನೊಂದು ಕಡೆ ದಾನಶೂರ ಕರ್ಣನ ತ್ಯಾಗಜೀವನ ಇವು ಹೃದಯಂಗಮ ಚಿತ್ರಗಳಾಗಿವೆ. ಹಾಗೆಯೇ, ವಾಚಕರು ಸ್ತ್ರೀಪಾತ್ರಗಳನ್ನೋದುವಾಗ, ಅವರ ಮನಸ್ಸು ದ್ರೌಪದಿ, ಕುಂತಿ, ಉತ್ತರೆ ಇವರೆಡೆಗೆ ಸೆಳೆಯಲ್ಪಡುತ್ತದೆ. ಇದಕ್ಕೆ ಕಾರಣ, ಭಾರತವನ್ನು ಬರೆದಿರುವವರೆಲ್ಲರೂ ಈ ಸ್ತ್ರೀ ವ್ಯಕ್ತಿಗಳ ಪಾತ್ರ ನಿರೂಪಣೆಯಲ್ಲಿಯೇ ಹೆಚ್ಚು ಕೌಶಲವನ್ನು ತೋರಿಸಿದ್ದಾರೆ. ಆದ್ದರಿಂದಲ್ಲೆ ನಮಗೆ ಇವರ ಬಗ್ಗೆ ಅನುತಾಪವುಂಟಾಗುತ್ತದೆ. ಕುಂತಿಯ ಪಾತ್ರಕ್ಕೆ ಜೀವಕಳೆ ತುಂಬಿರುವುದು. ಆಕೆಯು ಪಾಂಡವರಂತಹ ಸಜ್ಜನರೂ ವೀರರೂ ಆದ ವ್ಯಕ್ತಿಗಳ ಮಾತೆಯೆಂದು. ಆಕೆಯ ವೈಧವ್ಯ ಪ್ರಾಪ್ತಿಯು ದುಃಖ ಪೂರಿತವಾದದ್ದು. ವಿಧವೆಯಾದರೂ ಆಕೆಯ ಹೊಣೆಯು ಅಸಾಧಾರಣ ವಾದದ್ದು.ತನ್ನ ಪತಿಯ ಮರಣಕ್ಕೆ ಕಾರಣಳಾದ ತನ್ನ ಸವತಿಯು ಅಗ್ನಿಪ್ರವೇಶ ಮಾಡಿದನಂತರ ಆಕೆಯ ಮಕ್ಕಳನ್ನೂ ತನ್ನ ಮಕ್ಕಳನ್ನೂ ಸಾಕಿ, ಅವರು ಅಸಮಾನರಾದ ವೀರರಾಗುವಂತೆ ನೋಡಿಕೊಳ್ಳುತ್ತಾಳೆ. ಈ ಕಾರ್ಯ ಸಾಧನೆ ಗಾಗಿ ಆಕೆ ಪಟ್ಟ ಶ್ರಮ ಪರಂಪರೆಗಳೂ, ಕಂಟಕಗಳೂ ಎಂತಹವರ ಮನವ ನ್ನಾದರೂ ಕರಗಿಸುತ್ತದೆ. ಇಷ್ಟಾದರೂ, ವೀರಕನ್ಯೆಯೂ ನಂತರ ಮಹಾ ರಾಣಿಯೂ, ವೀರಮಾತೆಯೂ, ಪತಿವ್ರತಾಶಿರೋಮಣಿಯಾದ ಚಿರದುಃಖಿನಿ ಗಾಂಧಾರಿಯ ವ್ಯಕ್ತಿತ್ವದ ಕಡೆಗೆ ಮನಸ್ಸನ್ನು ಹರಿಸುವವರು ಅತಿ ವಿರಳ.

ಗಾಂಧಾರಿಯು ಗಾಂಧಾರ (ಅಂದರೆ ಈಗಿನ ಕಾಂದಹಾರ್) ದೇಶದ ರಾಜನ ಕುವರಿ. ಈ ಕನ್ಯೆಯ ದೇಹಕಾಂತಿಯು ಗುಲಾಬಿ ಹೂವಿನ ಬಣ್ಣ ವನ್ನು ಅಣಕಿಸುವಂತಿತ್ತು. ಮನೋಹರಾಕೃತಿ, ನೀಳವಾದ ಕೃಷ್ಣ ಕೇಶರಾಶಿ, ಉಜ್ವಲ ನೇತ್ರಗಳು, ಸೌಮ್ಯ ವದನ ಇವುಗಳನ್ನೊಳಗೊಂಡ ಮನಮೋಹಕ ಬಾಲಕಿಯು ಅರಳುತ್ತಿರುವ ಪದ್ಮದಂತೆ ಅರಮನೆಯಲ್ಲಿ ರಾರಾಜಿಸುತ್ತಿದ್ದಳು. ಗಾಂಧಾರಿಯು ಅತಿ ಬುದ್ಧಿಶಾಲಿನಿಯಾಗಿದ್ದಳು. ಸಂಗೀತ, ಕಲೆ, ವ್ಯಾಸಂಗ ಇವುಗಳಲ್ಲೆಲ್ಲಾ ಹೆಚ್ಚು ಆಸಕ್ತಿಯಿದ್ದಿತು. ಅದರಲ್ಲಿಯೂ ಈಕೆಗೆ ಚಿತ್ರಕಲೆಯು ಹೆಚ್ಚು ಪ್ರಿಯವಾಗಿದ್ದಿತು. ಗುರುಮುಖದಲ್ಲಿ ಅಭ್ಯಾಸಿಸುತ್ತಿದ್ದ ಈ ಕಲೆಯಲ್ಲಿ ನಿಪುಣತೆಯನ್ನು ಪಡೆದು, ಹಲವಾರು ಅಸಾಧಾರಣ ಚಿತ್ರಗಳನ್ನು ಬರೆದು ತನ್ನ ಗುರುವೇ ಅಪ್ರತಿಭರಾಗುವಂತೆ ಪ್ರೌಢಿಮೆಯನ್ನು ತೋರಿದ್ದಳು.

ಅರಮನೆಯಲ್ಲಿ ಗಾಂಧಾರಿಗೆ ಅವಳ ಸಮವಯಸ್ಸಿನ ಸಖಿಯರನೇಕ ರಿದ್ದರು. ಇವರೆಲ್ಲರ ವ್ಯಾಸಂಗ, ಕಲಾಭ್ಯಾಸ, ಕ್ರೀಡೆಗಳು ಒಟ್ಟೊಟ್ಟಿಗೆ ನಡೆಯುತ್ತಿದ್ದವು. ಆದ್ದರಿಂದ ಸಖಿಯರು ಪರಸ್ಪರ ಸಲಿಗೆಯಿಂದಿರುತ್ತಿದ್ದರು. ಆದೊಂದು ದುರ್ದಿನದಲ್ಲಿ, ಸಖಿಯರೆಲ್ಲರೂ ಚಿತ್ರಶಾಲೆಯಲ್ಲಿ ಕಲೆತು ಹರಟು ತ್ತಿದ್ದರು. ಆಗ, ಗಾಂಧಾರಿಯು ಹನ್ನೆರಡು ವರ್ಷಗಳ ಬಾಲೆ. ಒಬ್ಬರೊಬ್ಬರೂ ತನ್ನ ಭಾವೀ ಪತಿಯು ಹೇಗಿರುತ್ತಾನೆಂಬುದನ್ನು ಚರ್ಚಿಸಿಕೊಳ್ಳುತ್ತಿದ್ದರು. ಒಬ್ಬೊಬ್ಬರು ತಮಗಿಷ್ಟವಾದ ಸೌಂದರ್ಯವನ್ನು ಕಲ್ಪಿಸಿಕೊಂಡು, ಕಲ್ಪಿತ ವರನ ಚಿತ್ರವನ್ನು ರಚಿಸಿ ತೋರಿಸಿಕೊಳ್ಳಬೇಕೆಂದು ತೀರ್ಮಾನಿಸಿಕೊಂಡರು. ಗಾಂಧಾರಿಯು ಕಣ್ಮುಚ್ಚಿ ನೀರವತೆಯಿಂದ ಧ್ಯಾನಮಗ್ನಳಾದಳು. ಸುದೀರ್ಘ ಕಾಯನೂ, ಶುಭ್ರ ವರ್ಣನೂ, ತೇಜಸ್ವಿಯೂ ಆದ ಮಾನವಾಕೃತಿಯನ್ನು ತನ್ನ ಹೃತ್ಕಮಲದಲ್ಲಿ ಧ್ಯಾನಿಸಿ ನಿಲ್ಲಿಸಿಕೊಂಡಳು. ಬಳಿಕ, ಸುಮಕೋಮಲ ವಾದ ಕರದಲ್ಲಿ ಕುಂಚವನ್ನು ಪಿಡಿದು, ತುಂಬು ಹೃದಯದಿಂದ ರೇಖೆಗಳನ್ನೆಳೆ ಯಲಾರಂಭಿಸಿದಳು. ಅಂದು ಸೃಜಿಸಿದ ಪುರುಷಾಕೃತಿಯು ಚಿತ್ರಕಲೆಯನ್ನೆಲ್ಲಾ ಎರಕಹೊಯ್ದು ನಿರೂಪಿಸಿದಂತಿತ್ತು. ಈ ವೇಳೆಗೆ ಗಾಂಧಾರಿಯ ಇತರ ಸಖಿಯರು ತಮ್ಮ ಸರಳ ಕಲ್ಪನೆಗೆ ತಕ್ಕಂತಹ ಆಕೃತಿಗಳನ್ನು ರಚಿಸಿಬಿಟ್ಟಿದ್ದರು; ಬಳಿಕ ಇವರು ಗಾಂಧಾರಿಯ ಹಿಂದೆ ಅಡಗಿ ಆಕೆಯ ಕಲಾನೈಪುಣ್ಯತೆಗೆ ತಲೆದೂಗಿ ತನ್ಮಯರಾಗಿ ನೋಡುತ್ತಿದ್ದರು. ಚಿತ್ರ ರಚನೆಯಲ್ಲಿ ಮಗ್ನಳಾಗಿ

ಭಾವಪರವಶಳಾಗಿದ್ದ ಗಾಂಧಾರಿಯು ಇಹಲೋಕದ ವ್ಯಾಪಾರವನ್ನೇ ಮರೆತಂತಿದ್ದಳು. ಸಖಿಯರು ಒಬ್ಬೊಬ್ಬರಾಗಿ ಅವಳಿಗೆ ಧ್ಯಾನಭಗ್ನ ಮಾಡದೆ ಹೊರಟುಹೋದರು. ಚಿತ್ರವು ಮುಗಿಯಿತೆಂಬ ಭಾವನೆಯು ಗಾಂಧಾರಿಯ ಮನಸ್ಸಿನಲ್ಲಿ ಮೂಡಿತು. ಈ ವೇಳೆಗೆ, ಅವಳ ಮಾತಾಮಹನು ಬಂದಿರುವುದಾಗಿಯೂ ಅವಳನ್ನು ನೋಡಬಯಸುತ್ತಾನೆಂದೂ ತಾಯಿಯಿಂದ ಕರೆ ಬಂದಿತು. ಚಿತ್ರ ಮುಗಿಯಿತೆಂದು ಅಂದುಕೊಂಡ ಬಾಲೆಯು ಅದನ್ನು ಮುಚ್ಚಿ ಬದಿಗಿಟ್ಟು ಅಂತಃಪುರದ ಕಡೆಗೆ ನಡೆದಳು.

ಮರುದಿನ ಮತ್ತೆ ಸಖಿಯರೆಲ್ಲರೂ ಕಲೆತು ತಮ್ಮ ಚಿತ್ರಗಳನ್ನು ಪರಸ್ಪರ ತೋರಿಸಿಕೊಳ್ಳಲಾರಂಭಿಸಿದರು. ಗಾಂಧಾರಿಯೂ ತನ್ನ ಚಿತ್ರವನ್ನು ತೆರೆದಳು. ಹಾಯ್ ! ತನ್ನ ಸೃಷ್ಟಿಚಿತ್ರ, ಅದೂ ತನ್ನ ಭಾವೀಪತಿಯ ಕಲ್ಪನಾ ಚಿತ್ರ—ಅಂಧ ಸುಂದರನನ್ನು ನಿರ್ಮಿಸಿಕೊಂಡಿದ್ದಾಳೆ. ವಿಧಿ ವಿಲಾಸವೋ ಎಂಬಂತೆ ಕಣ್ಣಾಲಿಗಳಲ್ಲಿ ದೃಷ್ಟಿಯನ್ನಿಡಲು ಮರೆತಿದ್ದಾಳೆ. ಕುತೂಹಲದಿಂದ ಗುಂಪುಕಟ್ಟಿಕೊಂಡು ಚಿತ್ರವನ್ನು ನೋಡುತ್ತಿದ್ದ ಸಖಿಯರು ಕುರುಡು ಚಿತ್ರವನ್ನು ನೋಡಿದ್ದೇ, ಒತ್ತಟ್ಟಿಗೆ ಗೊಳ್ಳೆಂದು ಕೇಕೆಹಾಕಿ ನಕ್ಕರು. ಗಾಂಧಾರಿಯ ಸುಮಕೋಮಲ ಹೃದಯಕ್ಕೆ ಬರೆ ಎಳೆದಂತೆ ನೋವಾಯಿತು. ಸಖಿಯರು ಮತ್ತೆ ಮತ್ತೆ ನಗುತ್ತಾ 'ಕುರುಡ ಗಂಡ, ಕುರುಡ ಗಂಡ' ಎಂದು ಕೂಗಿ ನಲಿದಾಡಿದರು. ಗಾಂಧಾರಿಯು ತತ್ತರಿಸಿ, ಆ ಚಿತ್ರಪಠವನ್ನು ನೋಡಲಾರದೆ ತೀವ್ರ ಯಾತನೆಯಿಂದ ಚೀರುತ್ತಾ ಕಣ್ಮುಚ್ಚಿಕೊಂಡಳು. ಆಗ ಸಖಿಯರು ಚೆಲ್ಲಾಟವನ್ನು ನಿಲ್ಲಿಸಿ ನೊಂದ ರಾಜಕುಮಾರಿಯನ್ನು ಪರಿಪರಿಯಾಗಿ ಸಂತೈಸಿದರು. ಈ ಅಪೂರ್ವ ಘಟನೆಯು ನಡೆದ ನಂತರ ಗಾಂಧಾರಿಗೆ ಚಿತ್ರಕಲೆಯ ಮೇಲೆ ತಿರಸ್ಕಾರವುಂಟಾಯಿತು ; ತತ್ಪರಿಣಾಮವಾಗಿ ಅದರ ಹಂಬಲವನ್ನೇ ತ್ಯಜಿಸಿಬಿಟ್ಟಳು. ಅಂದು ಮೊದಲು, ಚಿತ್ರಶಾಲೆಗೆ ಬಾಲೆಯು ಕಾಲಿಡಲಿಲ್ಲ.

ಮೇಲ್ಕಂಡ ಘಟನೆಯು ನಡೆದ ಒಂದು ವರ್ಷದೊಳಗೆ ಗಾಂಧಾರಿಯ ತಂದೆಯು ಅಕಸ್ಮಿಕವಾಗಿ ಸಂಪ್ರಾಪ್ತವಾದ ಯುದ್ಧದಲ್ಲಿ ಮಡಿದನು. ವೈಧವ್ಯ ದುಃಖವನ್ನು ನೀಗಲು ತಾಯಿಯು ಸಹಗಮನ ಮಾಡಿದಳು. ಇದೇ, ಗಾಂಧಾರಿಯ ದುಃಖ ಜೀವನಕ್ಕೆ ನಾಂದಿಯಾಯಿತು. ಅರಸನ ಹಿರಿಯ

ಪುತ್ರನೇ ಈ ಕನ್ಯಾವಿತಂತುವಿನ ಪೋಷಕನಾದನು. ಈತನಾದರೊ ಪಾಷಂಡ ಹೃದಯವುಳ್ಳವನಾಗಿದ್ದನು. ಅನೇಕ ವೇಳೆ ತಂಗಿಯೊಡನೆ ನಿಷ್ಠುರತೆಯಿಂದ ವರ್ತಿಸುತ್ತಿದ್ದನು. ಆದರೂ, ಗಾಂಧಾರಿಯ ಮನಸ್ಸು ಅಧ್ಯಾತ್ಮ ಜೀವನದ ಹಾದಿಯನ್ನು ಹಿಡಿದಿದ್ದರಿಂದ ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ.

ಸ್ವಲ್ಪ ಕಾಲದ ನಂತರ, ಕುರುವಂಶ ಸಂಭೂತ ಧೃತರಾಷ್ಟ್ರನಿಗೆ ಕನ್ಯೆಯನ್ನು ಹುಡುಕುತ್ತಾ ಬಂದ ಜನರು ಗಾಂಧಾರಕ್ಕೂ ಬಂದರು. ಗಾಂಧಾರಿಯ ರೂಪು, ಲಾವಣ್ಯ, ಸದ್ಗುಣಗಳ ಪರಿಮಳವು ಭೀಷ್ಮನವರೆಗೂ ಹರಡಿತ್ತು. ಕನ್ಯಾರ್ಥಿಯಾಗಿ ಬಂದಿದ್ದ ಸ್ತ್ರೀಲಕ್ಷಣಜ್ಞನೂ, ರಾಜಪುರೋಹಿತನೂ ವರನ ಚಿತ್ರಪಠವನ್ನು ತಂದಿದ್ದರು. ವರನು ಅಂಧನಾದರೂ ತೇಜಸ್ವಿಯಾಗಿದ್ದು, ಶೋಭಿಸುತ್ತಿದ್ದನು. ಬಂದಿದ್ದವರು, ವರನು ಹುಟ್ಟು ಕುರುಡನೆಂದು ಮರೆಮಾಚದೆ ಹೇಳಿದುದಲ್ಲದೆ, ಈ ವಿವಾಹದ ಫಲವಾಗಿ ಅರಸನಿಗೆ ಯಥೇಚ್ಛವಾದ ಪುರಸ್ಕಾರವು ಲಭಿಸುತ್ತೆಂದೂ ಭರವಸೆ ಕೊಟ್ಟರು. ಪ್ರಲೋಭಿಯಾದ ಅಣ್ಣನು ಗಾಂಧಾರಿಗೆ ವರನ ಪೂರ್ವೋತ್ತರವನ್ನು ತಿಳಿಸಿ ಪ್ರಶಂಸೆ ಮಾಡಿದನು ; ಆದರೆ ಆತನಿಗೆ ದೃಷ್ಟಿ ಲೋಪವಿದ್ದ ಸಂಗತಿಯನ್ನು ತಿಳಿಸದೆ ಮರೆಮಾಚಿದನು. ಹೀಗೆ ಅಣ್ಣನ ಕಪಟ ತಂತ್ರಕ್ಕೆ ಬಲಿಯಾದಳು ಗಾಂಧಾರಿ. ಮದುವೆಯು ನಿಷ್ಕರ್ಷೆಯಾಗಿ, ಒಂದು ಶುಭ ಮುಹೂರ್ತದಲ್ಲಿ ಗಾಂಧಾರಿಯ ವಿವಾಹವು ನೆರವೇರಿತು. 'ಶುಭ ದೃಷ್ಟಿ'ಯ ಸಮಯದಲ್ಲಿ ಪುರೋಹಿತರ ಹೇಳಿಕೆಯಂತೆ ವಧೂವರರು ಪರಸ್ಪರ ನೋಡಬೇಕಾಯಿತು. ಹಾಯ್ ! ಆಗಮಾತ್ರ ತನ್ನ ಪತಿಯು ಪೂರ್ಣ ಅಂಧನೆಂಬ ಸಂಗತಿಯು ಅವಳಿಗೆ ಮುಂದಟ್ಟಾಯಿತು. ಆಕೆಯ ಹೃದಯಕ್ಕೆ ತೀವ್ರವಾದ ಪೆಟ್ಟು ತಾಕಿತು. ಬಾಲ್ಯದ ಚೆಲ್ಲಾಟದಲ್ಲಿ ಅವಿವೇಕದಿಂದ ಸೃಷ್ಟಿಸಿಕೊಂಡ ಪತಿಯ ಕುರುಡುತನವು ಇಂದು ಜೀವನದಲ್ಲಿ ನಿಜವಾಗಿ, ಅವಳ ಜೀವನವೇ ಬರಡಾಯಿತು.

ಹೀಗೆ ಜೀವನಕ್ಕೆ ಬಿದ್ದ ಪೆಟ್ಟಿನಿಂದ ಗಾಂಧಾರಿಯು ಧೃತಿಗೆಡಲಿಲ್ಲ. ಇದಕ್ಕೆ ಪ್ರತಿಯಾಗಿ ಅವಳ ಆತ್ಮವು ವಿಕಸಿಸಿತು. ಅವಳ ಜೀವನ ಪರ್ಯಂತವೂ ಉಜ್ವಲ ಪತಿವ್ರತೆಯಂತೆ ಬಾಳಿದಳು. ಮಾತಾಮಹಿ ಸತ್ಯವತೀ ದೇವಿಯು ಬದುಕಿರುವವರೆಗೂ, ತ್ರಿಕರಣಶುದ್ಧಿಯಾಗಿ ಸೇವಿಸಿದಳು. ಭೀಷ್ಮರನ್ನು ತನ್ನ

ಸ್ವಂತ ತಂದೆಯಂತೆ ಭಾವಿಸಿ ಸೇವೆಗೈಯ್ಯುತ್ತಿದ್ದಳು. ಸತ್ಯವತಿಯ ಮರಣಾನಂತರ ಒಂದು ದಿನ ಗಾಂಧಾರಿಯು ಗಾಢವಾಗಿ ಆಲೋಚಿಸಿದಳು. ಬಾಹ್ಯ ಪ್ರಪಂಚದ ಅನುಭವವೂ, ಪ್ರಕೃತಿಯ ಸೊಬಗೂ, ಸೌಂದರ್ಯಾವಲೋಕನ ಪ್ರಾಪ್ತಿಯೂ ತನ್ನ ಪತಿಗಿಲ್ಲದ್ದು ತನಗೂ ಅನವಶ್ಯಕವೆಂದು ತಿಳಿದು, ಕಣ್ಣುಗಳನ್ನು ಕಟ್ಟಿಸಿಕೊಂಡು ಜೀವನವನ್ನು ಸಾಗಿಸುತ್ತಿದ್ದಳು.

ಗಾಂಧಾರಿಗೆ ದುರ್ಯೋಧನ, ದುಶ್ಶಾಸನ ಮುಂತಾದ ನೂರು ಜನ ಪುತ್ರರೂ, ದುಶ್ಶಳೆಯೆಂಬ ಕುವರಿಯೂ ಜನಿಸಿದರು. ಸೌಂದರ್ಯ, ಸಾಮರ್ಥ್ಯಗಳಲ್ಲಿ ಅಸಮಾನರಾದ ವೀರ ದುರ್ಯೋಧನ, ದುಶ್ಶಾಸನರು ದೈವಬಲವಿಲ್ಲದಿದ್ದುದರಿಂದ ಭಾರತ ಯುದ್ಧದಲ್ಲಿ ಹತರಾದರು. ಪಾಂಡವ ಪುತ್ರರಾದ ಭೀಮಾರ್ಜುನರಿಗೆ ಇವರು ಯಾವ ವಿಧದಲ್ಲಿಯೂ ಕಡಿಮೆ ಇರಲಿಲ್ಲ. ಇಂತಹ ವೀರಪುತ್ರರನ್ನು ಪಡೆದ ರಾಜಮಹಿಷಿಯಾಗಿದ್ದರೂ ಗಾಂಧಾರಿಯು ಸುಖಿಯಾಗಲಿಲ್ಲ. ದೈವವು ಆಕೆಯ ಜೀವನದಲ್ಲಿ ಹೊಂದಿಸಿದ ಘಟನೆಗಳು ಅಂತಹವು.

ಧೃತರಾಷ್ಟ್ರನೇ ಹಿರಿಯನಾದರೂ, ಅಂಧನಾದುದರಿಂದ ಆತನ ತಮ್ಮ ಪಾಂಡುರಾಯನು ರಾಜ್ಯವಾಳುತ್ತಿದ್ದನು. ಪಾಂಡುರಾಯನು ಮೃತಿಹೊಂದುವ ವೇಳೆಗೆ ದುರ್ಯೋಧನನು ಪ್ರಾಯಸಮರ್ಥನಾಗಿದ್ದನು. ರಾಜ್ಯಸೂತ್ರವನ್ನು ತಾನೇ ವಹಿಸಿಕೊಂಡು ದಕ್ಷತೆಯಿಂದ ಆಳತೊಡಗಿದನು. ಈತನು ಜ್ಞಾನಿ, ಸಕಲ ಲಕ್ಷಣ ಸಂಪನ್ನನು; ಪ್ರಜೆಗಳನ್ನು ದರ್ಪದಿಂದ ಆಳುತ್ತಿದ್ದರೂ ಅವರೆಲ್ಲರೂ ಸುಭಿಕ್ಷದಿಂದಲೂ, ಸೌಖ್ಯದಿಂದಲೂ ಇರುವಂತೆ ನೋಡಿಕೊಳ್ಳುತ್ತಿದ್ದನು. ಇಷ್ಟಾದರೂ ಈತನು ದುರದೃಷ್ಟವಂತನಾಗಿದ್ದನು. ಶಕುನಿಯಂತಹ ಸೋದರಮಾವನು ಆತನಿಗೆ ದೊರೆತದ್ದು ಮಂಥರೆಯ ನೆರವು ಕೈಕೆಗೆ ದೊರೆತಂತಾಯಿತು. ಜ್ಞಾತಿಮಾತ್ಸರ್ಯದ ವಿಷಬೀಜವನ್ನು ಶಕುನಿಯು ದುರ್ಯೋಧನನ ಮನಸ್ಸಿನಲ್ಲಿ ಬಿತ್ತಿದನು. ಅದು ಮೊಳೆತು ವಿಷಧರ ವೃಕ್ಷವಾಯಿತು. ಅದರಲ್ಲಿ ಬಿಟ್ಟ ಫಲಗಳನ್ನು ತಾನೂ, ತನ್ನ ಮಾತಾಪಿತೃಗಳೂ ಮತ್ತು ಆಶ್ರಯ ಜೀವಿಗಳೂ ಭಕ್ಷಿಸಿ ದುಃಖಕ್ಕೀಡಾಗಬೇಕಾಯಿತು. ದುರ್ಯೋಧನನು ಬರಬರುತ್ತಾ ಉದ್ಧಟತನದಿಂದ ವರ್ತಿಸಿ ಪಾಂಡವರಿಗೆ

ಕೇಡು ಬಗೆದನು. ಹೀಗಾಗಿ, ಕೌರವೇಶ್ವರನನ್ನು ಎಲ್ಲರೂ ದ್ವೇಷಿಸುವಂತಾಯಿತು. ಇಂತಹ ಸನ್ನಿವೇಶದಲ್ಲಿ, ಯಾವ ಮಾತೆಯು ಸುಖಿಯಾಗಿರಬಲ್ಲಳು!

ಗಾಂಧಾರಿಯಾದರೋ ಸದಾ ಪುತ್ರರ ಹಿತೈಷಿಣಿಯಾಗಿ ಅವರು ಸನ್ಮಾರ್ಗ ಪ್ರವರ್ತಕರಾಗುವಂತೆ ಬೋಧಿಸುತ್ತಿದ್ದಳು. ದೂತವಾಕ್ಯವನ್ನು ತಂದ ಶ್ರೀಕೃಷ್ಣನನ್ನು ತುಂಬು ಸಭೆಯಲ್ಲಿ ಹೀಯಾಳಿಸಿದ ಪುತ್ರರನ್ನು ಎಲ್ಲರೆದುರಿನಲ್ಲಿಯೂ ಛೀ ಗುಟ್ಟಿದಳು. ಆದರೇನು, ದುರ್ಯೋಧನನ ಮನಸ್ಸು ಬದಲಾಯಿಸಲಿಲ್ಲ. ವಿಧಿ ಪ್ರೇರಣೆಯಿಂದ, ಕುರುಕ್ಷೇತ್ರವು ಸ್ಮಶಾನಕ್ಷೇತ್ರವಾಗ ಬೇಕಾಯಿತು. ವೀರಮಾತೆ ಗಾಂಧಾರಿಯು ನೂರು ಜನ ಪುತ್ರರನ್ನೂ ಕಳೆದು ಕೊಂಡು ನಿರಂತರ ಶೋಕವನ್ನು ಅನುಭವಿಸಬೇಕಾಯಿತು. ಅಷ್ಟಾದರೂ, ಈಕೆಯು ದೈವದ್ರೋಹಿಯಾಗಲಿಲ್ಲ. ತನ್ನ ಭಾಗ್ಯದಂತಿದ್ದ ಮಕ್ಕಳ ಮರಣಕ್ಕೆ ಹೇತುವಾದ ಶ್ರೀಕೃಷ್ಣನನ್ನಾಗಲೀ, ಪಾಂಡವರನ್ನಾಗಲೀ ಅವಹೇಳನ ಮಾಡ ಲಿಲ್ಲ. ಧರ್ಮರಾಯನನ್ನಂತೂ ತನ್ನ ಪುತ್ರನೆಂದೇ ಭಾವಿಸಿದ್ದಳು. ಆತನಿಗೆ ಪಟ್ಟಾಭಿಷೇಕವಾದನಂತರ ಮನಸಾರ ಹರಸಿ, ಆತನ ಅನುಜ್ಞೆಯನ್ನು ಪಡೆದು ತನ್ನ ಪತಿಯೊಡನೆ ವಾನಪ್ರಸ್ಥಾಶ್ರಮಕ್ಕೆ ಹೊರಟಳು. ಈ ಉಜ್ವಲ ನಾರೀಮಣಿಯ ಚಿತ್ತಸ್ಥೈರ್ಯ, ಆತ್ಮಸಂಯಮ ಶಕ್ತಿ ಇವುಗಳನ್ನು ಅರಿತಿದ್ದವಳು ಕುಂತೀದೇವಿಯೊಬ್ಬಳು ಮಾತ್ರ. ಪಾಂಡವರ ವನವಾಸದ ಅವಧಿಯನ್ನೆಲ್ಲಾ ಕುಂತಿಯು, ಗಾಂಧಾರಿ ಮತ್ತು ಧೃತರಾಷ್ಟ್ರರ ಸೇವೆಯಲ್ಲಿಯೇ ಕಳೆಯುತ್ತಿದ್ದಳು. ಕಡೆಯುಬಾರಿ ವಾನಪ್ರಸ್ಥಾಶ್ರಮಕ್ಕೆ ತೆರಳಿದ ವೃದ್ಧ ದಂಪತಿಗಳನ್ನು ಹಿಂಬಾಲಿಸಿದಳು. ತನ್ನ ಮಕ್ಕಳು ಎಷ್ಟು ತಡೆಗಟ್ಟಿದರೂ ಒಪ್ಪಲಿಲ್ಲ. ಅವರ ಸೇವೆಯನ್ನು ಮನಃಪೂರ್ವಕವಾಗಿ ವನದಲ್ಲಿಯೂ ನಡೆಸುತ್ತಿದ್ದಳು. ದೈವಪ್ರೇರಣೆಯಿಂದ ವನದಲ್ಲಿ ಉತ್ಪತ್ತಿ ಯಾದ ಕಾಳ್ಕಿಚ್ಚಿನಲ್ಲಿ ಮೂವರೂ ಆಹುತಿಯಾಗಿಹೋದರು.

ಹೀಗೆ, ಬಾಲ್ಯದಿಂದಲೂ ದುಃಖಿಜೀವಿತೆಯಾದ ಗಾಂಧಾರಿಯ ಚರಿತ್ರೆಯು ಹೃದಯವನ್ನು ಕರಗಿಸುವಂತಹುದು. ಅಹಲ್ಯಾ, ದ್ರೌಪದಿ, ಮಂಡೋದರೀ, ಇಂತಹ ಮಹಾಪತಿವ್ರತೆಯರ ಶ್ರೇಣಿಯಲ್ಲಿ ಪೋಣಿಸ ಲ್ಪಡಲು ಯೋಗ್ಯಳಾದ ವ್ಯಕ್ತಿಯಾಗಿದ್ದಾಳೆ.

## ಪ್ರಶ್ನೆಗಳು

೧. ಗಾಂಧಾರಿಯು ಬಾಲ್ಯದಲ್ಲಿ ನಡೆದ ಅಪೂರ್ವ ಘಟನೆಯನ್ನು ವಿವರಿಸಿ.

೨. ಗಾಂಧಾರಿಯ ಗುಣಗಳಲ್ಲಿ ಮುಖ್ಯವಾಗಿ ಕಂಡುಬರುವ ಮೂರು ಗುಣಗಳನ್ನು ತಿಳಿಸಿ.

೩. 'ಗಾಂಧಾರಿಯು ಆದರ್ಶ ಸತಿ', ಹೇಗೆ?

# ಅಗ್ನಿಕನ್ಯೆ

ಚೋಳದೇಶದ ಅರಸ ವೀರಸೇನನ ಮಗಳು ಕನ್ನಗಿ. ಈ ಅಭಾಗಿನಿ ಕನ್ಯೆ ಜನಿಸಿದ ದಿನದಿಂದಲೂ ದುಃಖದಲ್ಲಿ ಮುಳುಗಿರಬೇಕೆಂಬುದೇ ದೇವರಿಚ್ಛೆ ಯಾಗಿರಬೇಕು. ಏಕೆಂದರೆ, ಇವಳು ಜನಿಸಿದ ಒಂಭತ್ತು ತಿಂಗಳೊಳಗಾಗಿ ತಾಯಿಯು ಅಳಿದಳು; ಮೂರು ವರ್ಷವು ತುಂಬುವ ವೇಳೆಗೆ, ಅರಸನ ತಮ್ಮ ಶೂರಸೇನನ ಪಿತೂರಿ ಫಲವಾಗಿ ಯುದ್ಧವು ಸನ್ನಿಹಿತವಾಗಿ ತಂದೆಯು ಯುದ್ಧಮಾಡುತ್ತಾ ಮಡಿದು ವೀರಸ್ವರ್ಗವನ್ನು ಸೇರಿದನು. ಅನಾಥ ಶಿಶು ಕನ್ನಗಿಯು ಯತ್ನವಿಲ್ಲದೆ ಚಿಕ್ಕಪ್ಪನ ಸಂರಕ್ಷಣೆಗೆ ಒಳಪಟ್ಟಿತು. ಶಾಂತ ಚಿತ್ತಳೂ, ಮುಗ್ಧಳೂ ಆದ ಮುದ್ದು ಕನ್ನಗಿ ಹೇಗೋ ಚಿಕ್ಕಪ್ಪನ ಕಲ್ಲು ಹೃದಯವನ್ನು ಕರಗಿಸಿ ಆದರ ಪಡೆದು ಬೆಳೆದಳು. ಪ್ರಾಯಸಮರ್ಥಳಾದ ನಂತರ ಇವಳ ವಿವಾಹವು ಅದೇ ಊರಿನ ಧನಿಕ ತರುಣ ಕೋವಲನ್ನ ನೊಂದಿಗೆ ನೆರವೇರಿತು.

ಮದುವೆಯ ದಿನ, ವಧೂವರರ ಆರತಿಅಕ್ಷತೆಯನ್ನು ಏರ್ಪಡಿಸ ಲಾಗಿತ್ತು. ಈ ಸಂದರ್ಭದಲ್ಲಿ, ಊರಿನ ಪ್ರಸಿದ್ಧ ನರ್ತಕಿ ಮಾಧವಿಯ ನರ್ತನವನ್ನು ಏರ್ಪಡಿಸಲಾಗಿತ್ತು. ಆದರೆ ಇವಳು ಒಂದು ಅಪೂರ್ವ ಕರಾರಿನಂತೆ ನರ್ತನಮಾಡಲು ಒಪ್ಪಿಕೊಂಡಳು. ಒಂದು ವಿಧವಾದ ಲೋಹದ ತೆಳು ಸರಪಣಿಯನ್ನು ಹಿಡಿದು ನಾಟ್ಯದ ಅಂತ್ಯದಲ್ಲಿ ನರ್ತನ ಮಾಡುವು ದಾಗಿಯೂ, ಆ ಹಾರವನ್ನು ಅವಳು ಒಂದು ಭಂಗಿಯಲ್ಲಿ ಹಾರಿಸಿದಾಗ ಯಾರ ಕೊರಳಲ್ಲಿ ಬೀಳುತ್ತದೆಯೋ ಅವನು ತನ್ನ ಪತಿಯಾಗಲೊಪ್ಪ ಬೇಕೆಂದೂ ಹೇಳಿದಳು. ಮನಮೋಹಕವಾದ ರೂಪುಳ್ಳ ಈ ತರುಣಿಯ ಪತಿಯಾಗಿರಲು ಸಭಿಕರಲ್ಲಿ ಅನೇಕರು ಹಾತೊರೆದು ಒಪ್ಪಿದರು. ಈ ಕರಾರಿಗೆ ಒಪ್ಪದಿದ್ದಲ್ಲಿ ಅವಳು ಮತ್ತ್ಯಾವ ಸಂಭಾವನೆಗೂ ಒಪ್ಪುವುದಿಲ್ಲವೆಂದೂ ವ್ಯಕ್ತ ಪಡಿಸಿದಳು. ಆಗ, ಸಭಿಕರೆಲ್ಲರೂ ಕೆಲವು ನಿಮಿಷಗಳವರೆಗೂ ಮೌನವನ್ನು ತಾಳಿ, ನಂತರ ಅಲ್ಲಲ್ಲೇ ಪರಸ್ಪರ ಮಾತನಾಡಿಕೊಂಡು, ಒಬ್ಬ ಹಿರಿಯರ

ಮೂಲಕ ಒಪ್ಪಿಗೆಯನ್ನು ಸೂಚಿಸಿದರು. ನರ್ತನವು ಕ್ರಮೇಣ ಆರಂಭ ವಾಯಿತು.

ಮಾಧವಿಯು ನಾಟ್ಯರಾಣಿಯಂತೆ ವಿವಿಧ ಮೋಹಕ ನರ್ತನಗಳನ್ನು ಪ್ರದರ್ಶಿಸಿ, ಸರ್ವರ ಕಣ್ಣುಗಳಿಗೂ ಹಬ್ಬವನ್ನುಂಟುಮಾಡುತ್ತಿದ್ದಳು. ಕಡೆಯ ನರ್ತನವು ಆರಂಭವಾಯಿತು. ಹಾರವು ಯಾರ ಕೊರಳಲ್ಲಿ ಬೀಳುವುದೋ ಎಂದು ಒಬ್ಬಬ್ಬರೂ ಮನದಲ್ಲಿ ಮಿಡುಕುತ್ತಿದ್ದರು. ಹೀಗಿರಲು, ಒಂದು ಆಶ್ಚರ್ಯ ಸಂಗತಿ ನಡೆಯಿತು. ಚತುರೆ ಮಾಧವಿ, ಮೋಹಿನಿಯಂತೆ ಅಲ್ಲೊಮ್ಮೆ ಇಲ್ಲೊಮ್ಮೆ ನೃತ್ಯಮಾಡುತ್ತ ಅತ್ಯದ್ಭುತವಾಗಿ ಹಾರವನ್ನು ವೈಯ್ಯಾರದಿಂದ ಬೀಸಿದಳು. ವಿಧಿಯ ಲೀಲೆಯೋ ಎಂಬಂತೆ, ಸರವು ವರ-ಕೋವಲನ್ನನ ಕೊರಳಿನಲ್ಲಿ ಬಿದ್ದಿತು. ಸಭಿಕರು ಕಣ್ಣರಳಿಸಿ ನೋಡಿ ಮೂಕರಂತೆ ಸ್ತಬ್ಧರಾದರು. 'ಧಿಕ್ಕಾರ! ಮೋಸ!' ಎಂದು ಅನೇಕರು ಕೂಗಿ ಹಾರಾಡಿದರು. ಶೂರಸೇನನು ನೋಡುತ್ತಾನೆ! ಅಳಿಯನ ಕೊರಳಿನಲ್ಲಿ ಹಾರ! ಸಾಧ್ವಿಯಾದ ಕಣ್ಣಗಿ ಎಲ್ಲರ ದೃಷ್ಟಿಗಳೂ ತನ್ನ ಪತಿಯ ಕಡೆಗೆ ಹೊರಳಿದುದನ್ನು ನೋಡುತ್ತಾಳೆ. ಪತಿಯ ಕೊರಳಿಗೆ ಮಾಯದ ಬಲೆ! ಸುಮಕೋಮಲಾಂಗಿಯು ತಲೆತಗ್ಗಿಸಿ ಕಣ್ಣೀರು ಸುರಿಸಿದಳು. ಇನ್ನೇನು ಸ್ಮೃತಿತಪ್ಪಿ ಬೀಳಬೇಕು, ಅಷ್ಟರಲ್ಲಿ ಶೂರಸೇನನು ಬಂದು ಹಿಡಿದೆತ್ತಿ ಅಂತಃಪುರಕ್ಕೆ ಕರೆದೊಯ್ದನು. ಕೋವಲನ್ನನು ಎದ್ದು, ಕುಪಿತನಾಗಿ, ಈ ಅನ್ಯಾಯದ ಕರಾರಿಗೂ ತನಗೂ ಯಾವ ಸಂಬಂಧವೂ ಇಲ್ಲವೆಂದು ಘರ್ಜಿಸಿದನು ಆದರೆ, ಮಾಧವಿಯು ಸಭೆಯನ್ನುದ್ದೇಶಿಸಿ, "ನ್ಯಾಯ ಭ್ರಷ್ಟರಾದೀರಿ, ಜೋಕೆ! ಅರಸ ಶೂರಸೇನರೂ ಮಂತ್ರಿ ಚಂಡಿದಾಸರೂ ಸೂಕ್ತ ತೀರ್ಪನ್ನು ಕೊಡಲಿ" ಎಂದು ಗಂಭೀರವಾಣಿಯಿಂದ ಹೇಳಿದಳು. ಅವರೂ ಸಹ ಯೋಚಿಸಿ, ಒಪ್ಪಂದದಂತೆ ಕೋವಲನ್ನನು ಮಾಧವಿಯೊಡನೆ ಪತಿಯಂತೆ ಇರಬೇಕೆಂದು ತೀರ್ಪನ್ನು ಕೊಟ್ಟರು. ಸಭೆಯು ಮೌನವಾಗಿ ಚದುರಿತು. ಕೋವಲನ್ನನು ಅಪರಾಧಿಯಂತೆ ನಿಂತನು. ಲಜ್ಜಾಹೀನಳಾದ ಮಾಧವಿಯು ಕೋವಲನ್ನನ ಕರಪಿಡಿದು ಕರೆದೊಯ್ದಳು. ಹೀಗೆ ಮದುವೆಯ ದಿನ ಮೂಡಿದ ಬೆಳಕು ಕನ್ನಗಿಯ ಪಾಲಿಗೆ ಆರಿ, ಅವಳ ಬಾಳಿಗೆ ಅಂಧಕಾರ ಕವಿಯಿತು.

ಒಲ್ಲದ ಮನಸ್ಸಿನಿಂದ ಹೋದ ಕೋವಲನ್ನನಿಗೆ, ಭೂಲೋಕವು ಸುರ ಲೋಕವೆಂದು ತೋರುವಂತೆ ಮಾಧವಿಯು ಬೆರಗುಮಾಡಿ ಜೀವನವನ್ನು ಸಾಗಿಸಿದಳು. ಕಾಲಕ್ರಮೇಣ ಜೀವನದಲ್ಲಿ ತೃಪ್ತನಾಗಿ ತನ್ನ ಧರ್ಮಪತ್ನಿ ಯನ್ನು ಮರೆತನು. ಇದೀಗ ವಿಧಿಯ ಮಹಿಮೆ! ಕೋವಲನ್ನನ ಸಂಪತ್ತೆಲ್ಲಾ ಮಾಯಾವಿನಿ ಮಾಧವಿಯ ಪಾಲಾಯಿತು. ಧನವನ್ನೂ, ಸ್ವಜನರನ್ನೂ, ಪತ್ನಿಯನ್ನೂ ಕಳೆದುಕೊಂಡು ನಿರ್ಗತಿಕನಾದನು. ಈ ವೇಳೆಗೆ ಹನ್ನೆರಡು ವರ್ಷಗಳು ಉರುಳಿಹೋದುವು. ಸಾಧ್ವಿ ಕನ್ನಗಿ ಪತಿಪಾದಗಳಲ್ಲಿ ಅನನ್ಯ ಸ್ಮರಣೆಯುಳ್ಳವಳಾಗಿ ವೀರ ತಪಸ್ವಿನಿಯಂತೆ ಸದಾ ದೇವರಪೂಜೆಯಲ್ಲಿ ನಿರತ ಳಾಗಿದ್ದಳು. ಅವಳ ವಾಸ, ಅರಮನೆಯ ಆವರಣದಲ್ಲಿ ನಿಯಮಿತವಾದ ಒಂದು ಕುಟೀರದಲ್ಲಿ ಜರುಗಿತು.

ಹೀಗಿರಲು, ಒಂದು ದಿನ, ಒಂದು ಮದುವೆಯ ಉತ್ಸವವು ಮಾಧವಿಯ ಮನೆಯ ಮುಂದೆ ಹಾದುಹೋಯಿತು. ಇದನ್ನು ನೋಡಿದೊಡನೆ ಕೋವ ಲನ್ನನಿಗೆ ತನ್ನ ವಿವಾಹ ದಿನದ ನೆನಪಾಯಿತು. ದುಃಖವನ್ನು ತಡೆಯದೆ ಅತ್ತುಬಿಟ್ಟನು. ಈ ವೇಳೆಗೆ ಬಡವ ಕೋವಲನ್ನನ ಮೇಲೆ ಮಾಧವಿಗೆ ಬೇಸರಿಕೆಯುಂಟಾಗಿತ್ತು. ಆದ್ದರಿಂದ, ಒಂದು ಪುಟ್ಟ ಕಲಹವನ್ನು ಹೂಡಿ, ಅವನನ್ನು ತನ್ನ ಮನೆಗೆ ಹೋಗುವಂತೆ ಹೇಳಿಬಿಟ್ಟಳು. ಮತ್ತೊಮ್ಮೆ ಕೋವಲನ್ನನು ದುಗುಡ ಹೃದಯದಿಂದ ತಲೆತಗ್ಗಿದವನಾಗಿ ಹೊರಟನು. ಅಲ್ಲಲ್ಲಿ ವಿಚಾರಿಸಿಕೊಂಡು, ಕನ್ನಗಿಯು ವಾಸವಾಗಿದ್ದ ಕುಟೀರವನ್ನು ಹೊಕ್ಕನು.

ಹನ್ನೆರಡು ವರ್ಷಗಳ ದೀರ್ಘ ವಿಯೋಗವಾದನಂತರ ಪತಿಯ ದರ್ಶನ! ತನ್ನ ಕಣ್ಣನ್ನು ತಾನೇ ನಂಬಲಾರದೆ ಕನ್ನಗಿಯು ತಟಸ್ಥಳಾಗಿ ನಿಂತಳು. ಪ್ರೇಮವು ಉಕ್ಕಿಹರಿಯಿತು. ಅವಳ ಪತಿಯೂ ಅಷ್ಟೇ ಇಕ್ಕಟ್ಟಿ ನಲ್ಲಿದ್ದನು. ಪುಂಡಲೀಕನ ಧ್ಯಾನದಲ್ಲಿ ನಿರತಳಾದ ವೀರತಪಸ್ವಿನಿ ಮಹಾಶ್ವೇತೆ ಯಂತೆ ಪ್ರಜ್ವಲಿಸುತ್ತಿರುವ ಪ್ರೌಢೆಯನ್ನು ತನ್ನ ಪತ್ನಿಯೆಂದುಕೊಳ್ಳಲು ಅಂಜಿಕೆಯೂ, ಹೆಮ್ಮೆಯೂ ಸಮ್ಮಿಳನವಾಗಿ ಹೃದಯವು ಬಿರಿಯುವಂತಾ ಯಿತು. ಮರುಕ್ಷಣದಲ್ಲಿ ತನ್ನ ಪಾದಗಳಮೇಲೆ ತನ್ನ ಪತ್ನಿಯು ಮಂಗಳ ಮಸ್ತಕವನ್ನಿಟ್ಟು ಬಾಷ್ಪಾಂಜಲಿಯಿಂದ ತೋಯಿಸಿದಳು. ಪರಸ್ಪರ ದುಃಖವು

ಶಮನವಾದನಂತರ, ಇಬ್ಬರೂ ಭಾವೀಜೀವನದ ಯೋಚನೆ ಮಾಡಿದರು. ಅತುಳೈಶ್ವರ್ಯವನ್ನೆಲ್ಲಾ ನೀಗಿಕೊಂಡು ತನ್ನ ಜೀವವೇ ತನಗೆ ಹೊರೆಯಂತಾಗಿರುವ ಕೋವಲನ್ನನು ತನ್ನ ಪತ್ನಿಯ ಪೋಷಣೆಯನ್ನೆಂತು ಕೈಗೊಳ್ಳುವನು? ನಾರೀರತ್ನ ಕನ್ನಗಿಯು ಹಿರಿಯ ಗೃಹಿಣಿಯಂತೆ ಚಿತ್ತಸ್ಥೈರ್ಯ ಪಡೆದು ಒಂದು ಆಲೋಚನೆಯನ್ನು ಸೂಚಿಸಿದಳು. ತನ್ನ ಕಾಲಿನ ಬಂಗಾರದ ಸರವೊಂದನ್ನು (ಅಂದರೆ ಚೋಳದೇಶದ ಸಂಪ್ರದಾಯದಂತೆ ಮದುವೆಯ ದಿನ ತಾಯಿಯಿಂದ ಕಾಲಿಗೆ ತೊಡಿಸಲ್ಪಡುವ ನೂಪುರ) ತೆಗೆದುಕೊಡುವುದಾಗಿಯೂ, ಅದರೊಳಗೆ ತುಂಬಿರುವ ಅಮೂಲ್ಯ ಮುತ್ತುಗಳನ್ನು ಮಾರಿ ಬಂದ ಹಣವನ್ನೇ ಮೂಲಧನವನ್ನಾಗಿ ಮಾಡಿಕೊಂಡು ವ್ಯಾಪಾರ ವೃತ್ತಿಯನ್ನು ಕೈಗೊಳ್ಳುವಂತೆ ಪ್ರೋತ್ಸಾಹಿಸಿದಳು. ಧೈರ್ಯದ ಕಿರಣ ಹೊಕ್ಕು, ಕೋವಲನ್ನನು ಮತ್ತೆ ಮಾನವನಾದನು.

ಸತಿಪತಿಯರು ಹೊಸ ಹುರುಪಿನಿಂದ ಪ್ರಯಾಣಬೆಳೆಸಿ, ಪಾಂಡ್ಯದೇಶಕ್ಕೆ ಬಂದರು. ಒಂದು ಕುಟೀರದಲ್ಲಿ ತಂಗಿ ವಿಶ್ರಮಿಸಿಕೊಂಡನಂತರ, ಕೋವಲನ್ನನು ಮಾರುಕಟ್ಟೆಗೆ ನೂಪುರವನ್ನು ತೆಗೆದುಕೊಂಡುಹೋಗಿ ಅಲ್ಲಿ ಓರ್ವ ಧನಿಕನ ಬಳಿ ಬೆಲೆ ಕಟ್ಟಿಸುತ್ತಿದ್ದನು. ಧನಿಕನು ಆಭರಣವನ್ನು ಪರೀಕ್ಷಿಸಿ ಅದರ ಅಮಿತ ಬೆಲೆಯನ್ನು ಅರಿತವನಾಗಿ, ಅದನ್ನು ತಂದ ವ್ಯಕ್ತಿಯನ್ನು ಸೂಕ್ಷ್ಮವಾಗಿ ನೋಡತೊಡಗಿದನು. ಆಗ ಒಂದು ವಿಚಾರವು ಅವನ ಸ್ಮರಣೆಗೆ ಬಂದಿತು. ಆ ಸಮಯದಲ್ಲಿ, ಪಾಂಡ್ಯರಾಣಿಯ ಒಂದು ನೂಪುರದ ಕಳುವಾಗಿತ್ತು. ಅದನ್ನು ಹುಡುಕುವುದರಲ್ಲಿ ರಾಜಭಟರು ಭಂಗವುಳ್ಳವರಾಗಿದ್ದರು. ಈ ಆಲೋಚನೆಯಿಂದ, ಧನಿಕನಿಗೆ ಉತ್ಸಾಹವುಂಟಾಯಿತು. ತಂದಿದ್ದ ನೂಪುರವೇ ಕಳುವಾಗಿದ್ದ ಆಭರಣವೆಂದೂ, ಕೋವಲನ್ನನೇ ಕಳ್ಳನೆಂದೂ ನಿರ್ಧರಿಸಿಕೊಂಡನು. ಕಳ್ಳನನ್ನು ಹಿಡಿದು, ರಾಜನಿಗೆ ಒಪ್ಪಿಸಿದಲ್ಲಿ ರಾಜನ ಮನ್ನಣೆಗೆ ಪಾತ್ರನಾಗುವುದರಲ್ಲಿ ಸಂಶಯವಿಲ್ಲವೆಂದು ಯೋಚಿಸಿಕೊಂಡನು. ಧನಿಕನು ಕೂಡಲೇ ಒಂದು ಉಪಾಯವನ್ನು ತೀರ್ಮಾನಿಸಿಕೊಂಡು, ಕೋವಲನ್ನನನ್ನು ಕುರಿತು, ಆ ರತ್ನಖಚಿತ ಆಭರಣಕ್ಕೆ ತಕ್ಕ ಬೆಲೆ ಕೊಡಲು ಅವನಿಗೆ ದುಸ್ಸಾಧ್ಯವೆಂದೂ, ರಾಜಾಸ್ಥಾನದಲ್ಲಿ ಅದಕ್ಕೆ ತಕ್ಕ ಬೆಲೆಯನ್ನು ಕೊಡಿಸುವುದಾಗಿಯೂ ವಾಗ್ದಾನಮಾಡಿ, ಅವನನ್ನು ಸಂಗಡಲೇ

ರಾಜಾಸ್ಥಾನಕ್ಕೆ ಕರೆದೊಯ್ದನು. ಪಾಂಡ್ಯ ರಾಜನಿಗೆ ತಾನು ಅನುಮಾನಪಟ್ಟ ಸಂಗತಿಯನ್ನು ಅರಿಕೆಮಾಡಿಕೊಂಡನು. ರಾಣಿಯನ್ನು ಕರೆಸಿ ನೂಪುರಗಳ ಪರೀಕ್ಷೆಯನ್ನು ನಡೆಸಲಾಯಿತು. ರಾಣಿಯ ಬಳಿಯಲ್ಲಿದ್ದ ಒಂಟಿ ನೂಪುರವೂ, ಕೋವಲನ್ನನು ತಂದಿದ್ದ ನೂಪುರವೂ ಜೋಡಿಯಂತೆ ಕಾಣುತ್ತಿದ್ದವು. ರಾಣಿಯೂ ಕನ್ನಗಿಯ ನೂಪುರವನ್ನು ತನ್ನ ಕಳುವಾಗಿದ್ದ ನೂಪುರವೆಂದೇ ಸಮರ್ಥಿಸಿದಳು. ರಾಜನು ಕೋವಲನನ್ನು ಕುರಿತು, ಅಂತಃಪುರದಲ್ಲಿದ್ದ ನೂಪುರವನ್ನು ಹೇಗೆ ಕದ್ದನೆಂದು ವಿಚಾರಣೆ ನಡೆಸಿದನು. ನಿರ್ದೋಷಿ ಕೋವಲನ್ನನು ನಿಜವಾದ ಸಂಗತಿಯನ್ನು ಬಿನ್ನವಿಸಿಕೊಂಡನು. ಆದರೆ, ಆವಿರ್ಭಾಗ್ಯನ ವಿಜ್ಞಾಪನೆಯನ್ನು ಕೇಳುವವರಾರು ? ಆಗ್ಗೆ ಪ್ರಚಾರದಲ್ಲಿದ್ದ ರಾಜಶಾಸನದಂತೆ, ಕೋವಲನ್ನನಿಗೆ ಕಳ್ಳತನಕ್ಕಾಗಿ ಮರಣದಂಡನೆ ವಿಧಿಸಲಾಯಿತು. ಆತನ ಶಿರಚ್ಛೇದನವಾಯಿತು.

ಇತ್ತ, ಅಭಾಗಿನಿ ಕನ್ನಗಿಯು ಮಾರುಕಟ್ಟೆಗೆ ಹೋದ ಪತಿಯ ಹಾದಿಯನ್ನು ಕಾದುಕುಳಿತು ಬೇಸತ್ತಳು. ಅವಳ ಮನಸ್ಸಿನಲ್ಲಿ ಒಂದು ವಿಧವಾದ ಯಾತನೆಯುಂಟಾಯಿತು. ಯತ್ನವಿಲ್ಲದೆ, ಕಟ್ಟಕಡೆಯಲ್ಲಿ ಪತಿಯ ಗತಿಯನ್ನರಿಯಲು, ಕನ್ನಗಿಯು ಮಾರುಕಟ್ಟೆಗೆ ಹೋದಳು. ಅಲ್ಲಿ, ತನ್ನ ಪತಿಗೆ ಪ್ರಾಪ್ತವಾದ ದುರ್ಘಟನೆಯನ್ನು ಅರಿತವಳಾಗಿ ಅರಮನೆಗೆ ತೆರಳಿದಳು. ರಾಜಸಭೆಯನ್ನು ಹೊಕ್ಕು ಕಣ್ಣಲ್ಲಿ ಕಿಡಿಸೂಸುತ್ತಾ ತನ್ನ ಪತಿಯನ್ನು ಕೊಲ್ಲಲು ಕಾರಣವೇನೆಂದು ಘರ್ಜಿಸಿ ಕೇಳಿದಳು. ಅಗ್ನಿಕನ್ಯೆಯಂತಿದ್ದ ಈ ತೇಜಸ್ವಿನಿಯನ್ನು ಕಂಡು ಅರಸನು ಬೆದರಿದನು. ಆಕೆಯ ಶಾಪಕ್ಕೆ, ತನ್ನ ಪತಿಯು ಎಲ್ಲಿ ಆಹುತಿಯಾಗುವನೋ ಎಂದು ರಾಣಿಯು ತತ್ತರಿಸಿದಳು. ಅರಸನು ಚೇತರಿಸಿಕೊಂಡು, ಕನ್ನಗಿಯನ್ನು ಕುರಿತು ಆಕೆಯ ಪತಿಯು ರಾಣಿಯ ನೂಪುರದ ಕಳ್ಳತನ ಮಾಡಿದುದಕ್ಕಾಗಿ ಶಿರಚ್ಛೇದನವಾಯಿತೆಂದು ಹೇಳಿದನು. ಕನ್ನಗಿಗೆ ಮತ್ತೂ ರೋಷವೇರಿತು. ತನ್ನ ಪತಿಯು ಪರಮ ನಿರ್ದೋಷಿಯೆಂದು ಘಂಟಾಘೋಷವಾಗಿ ಸಾರಿ, ಬೇಕಿದ್ದಲ್ಲಿ ಪರೀಕ್ಷಿಸಬಹುದೆಂದು ಘೋಷಿಸಿ, ನೂಪುರಗಳನ್ನು ಸಭೆಗೆ ತರಬೇಕೆಂದು ಸೂಚಿಸಿದಳು. ನೂಪುರಗಳನ್ನು ತರಿಸಲಾಯಿತು. ಆವೇಶಗೊಂಡ ಕನ್ನಗಿಯು ತನ್ನ ನೂಪುರವನ್ನು ಬೀಸಿ ರಭಸವಾಗಿ ಎಸೆದಳು. ಆ ಶಬ್ದಕ್ಕೆ ಸಭೆಯು

ತಲ್ಲಣಿಸಿತು. ನೂಪುರವು ಸೀಳಿ, ಅದರೊಳಗಿನ ಮುತ್ತುಗಳು ಚೆಲ್ಲಾಡಿದವು. ಅದನ್ನು ಮತ್ತೂ ಸಮರ್ಥಿಸಲು, ಕನ್ನಗಿಯು ತನ್ನ ಬಳಿಯಿದ್ದ ಮತ್ತೊಂದು ನೂಪುರವನ್ನು ಎಸೆದಳು. ಅದರಿಂದಲೂ ಮುತ್ತುಗಳು ಚೆಲ್ಲಾಡಿದವು. ಆ ಬಳಿಕ ರಾಣಿಯು ಒಂಟಿ ನೂಪುರವನ್ನು ಎಸೆಯಲು, ಅದರೊಳಗಿನಿಂದ ರತ್ನಗಳು ಚೆಲ್ಲಿದವು. ಆಗ, ಅರಸನ ಉಸಿರು ಕಟ್ಟಿದಂತಾಯಿತು. ತನ್ನ ಅವಿವೇಚನೆಯಿಂದ ಒಬ್ಬ ನಿರ್ದೋಷಿಯನ್ನು ಕೊಂದು, ಒಬ್ಬ ಪತಿವ್ರತೆಯ ಮಾಂಗಲ್ಯಭಾಗ್ಯವನ್ನು ಕಸಿದಂತಾಯಿತೆಂದು ಅರಿತನು. ಕೆಲವೇ ನಿಮಿಷ ಗಳಲ್ಲಿ ಅರಸನ ಹೃದಯವು ಸೀಳಿ, ಮೃತಿಹೊಂದಿದನು.

ದುಃಖಿತೆ ಕನ್ನಗಿಯು ಶೋಕವಿಹ್ವಲಳಾಗಿ ರೋಧಿಸುತ್ತಾ ಹೊರಗೆ ನಡೆದಳು. ವೀರಪತಿವ್ರತೆಯ ನೊಂದ ಹೃದಯದಿಂದ ಹೊರಟ ತೇಜಸ್ಸು ಅಗ್ನಿಕಿಡಿಯಾಗಿ ಹರಡಿತೋ ಎಂಬಂತೆ, ಪಾಂಡ್ಯರಾಜನ ಅರಮನೆಯಲ್ಲಿ ಇದ್ದಕ್ಕಿದ್ದಂತೆ ಬೆಂಕಿಬಿದ್ದು ದಹಿಸಲಾರಂಭವಾಯಿತು. ಈ ಜ್ವಾಲೆಯು ಕಾಳ್ಗಿಚ್ಚಿನಂತೆ ರಭಸವಾಗಿ ಹರಡಿ ಊರನ್ನೆಲ್ಲಾ ಭಸ್ಮಮಾಡಿತು. ಈ ಜ್ವಾಲೆಯಲ್ಲಿ ರಾಣಿಯೂ ಸಹಗಮನ ಮಾಡಿಬಿಟ್ಟಳು. ಇಷ್ಟಾದರೂ, ಇಹ ಜನ್ಮದಲ್ಲಿ ಪತಿಯ ಸುಖದಿಂದ ಬಾಹಿರಳಾದ ಕನ್ನಗಿಯ ಆತ್ಮಜ್ವಾಲೆಯು ಆರಲಿಲ್ಲ. ಒಂದು ಗುಡ್ಡವನ್ನೇರಿ, ಏಕಾಕಾರವಾಗಿದ್ದ ಜ್ವಾಲೆಯಲ್ಲಿ ಹಾರಿ ಬಿದ್ದು ಪ್ರಾಣತ್ಯಾಗ ಮಾಡಿದಳು. ಕನ್ನಗಿಯಂತಹ ಅಗ್ನಿಕನ್ಯೆಯರ ಆತ್ಮ ಬಲದಿಂದ ಉತ್ಪತ್ತಿಯಾದ ಜ್ವಾಲೆಯು ಆಧುನಿಕ ‘ ಅಣುಬಾಂಬಿಗೆ ’ ಏನೂ ಕಡಿಮೆಯಾಗಿರಲಿಲ್ಲವೆಂಬುದು ನಿದರ್ಶನವಾಗುತ್ತದೆ. ಈಗಲೂ, ತಮಿಳು ನಾಡಿನಲ್ಲಿ ಕಾವ್ಯರೂಪದಲ್ಲಿರುವ ಅಗ್ನಿಕನ್ಯೆ–ಕನ್ನಗಿಯ ಚರಿತ್ರೆಯನ್ನು ಹಾಡಿ ತೃಪ್ತಿಪಡುತ್ತಾರೆ.

## ಪ್ರಶ್ನೆಗಳು

೧. ಕನ್ನಗಿಯ ಮದುವೆಯಲ್ಲಿ ನಡೆದ ವಿಚಿತ್ರ ಘಟನೆಯನ್ನು ವಿವರಿಸಿ.

೨. ಕೋವಲನ್ನನು ತನ್ನ ಮದುವೆಯ ದಿನವನ್ನು ಹೇಗೆ ಸ್ಮರಿಸಿಕೊಂಡನು ?

೩. 'ಪತಿಯು ನಿರ್ದೋಷಿಯೆಂದು' ಕನ್ನಗಿಯು ಸಮರ್ಥಿಸಿದ ರೀತಿಯನ್ನು ವಿವರಿಸಿ.

೪. ಕನ್ನಗಿಯ ಕೋಪದ ಪರಿಣಾಮಗಳೇನು ?

# ಭಕ್ತಶಿರೋಮಣಿ

ತಿರುವನಂತಪುರಕ್ಕೆ ಸೇರಿದ ಶ್ರೀವಳ್ಳಿ ಪುತ್ತೂರು ಗ್ರಾಮದಲ್ಲಿ ಅತ್ಯಂತ ಸುಂದರವಾದ ಒಂದು ತೆಂಗಿನ ತೋಟವಿದ್ದಿತು. ಇದರಲ್ಲಿ, ಮುಗಿಲು ಮುಟ್ಟುವಂತಹ ನಾರಿಕೇಳಾ ವೃಕ್ಷಗಳು ಪಸರಿಸಿ, ಸದಾ ತಂಪಾದ ವಾತಾವರಣವಿರುವಂತೆ ಪ್ರಕೃತಿಯು ವರಪಾಲಿಸಿದಂತಿತ್ತು ಆ ವನ. ಈ ಸುಮನೋಹರವಾದ ವನದ ಮಧ್ಯದಲ್ಲಿ ಒಂದು ದಿವ್ಯ ಮಂದಿರವಿದ್ದಿತು. ಈ ಮಂದಿರದ ಸ್ವರ್ಣಕಲಶಗಳು ಉನ್ನತವಾಗಿದ್ದು ತೆಂಗಿನ ವೃಕ್ಷಗಳೊಡನೆ ಪ್ರತಿಭಟಿಸುವಂತಿದ್ದವು; ಈ ಕಲಶಗಳು ರಾತ್ರಿಯಲ್ಲಿ ನಕ್ಷತ್ರಗಳಂತೆ ಮಿನುಗುತ್ತಿದ್ದವು. ಮಂದಿರದಲ್ಲಿ ಭಗವಾನ್ ಶ್ರೀ ರಂಗನಾಥಸ್ವಾಮಿಯ ಮೂರ್ತಿಯು ಪ್ರತಿಷ್ಠಿತವಾಗಿದ್ದಿತು. ಈ ಮಂದಿರದ ಆಶ್ರಯದಲ್ಲಿ ಒಂದು ಚಿಕ್ಕದಾದರೂ ಪರಿಷ್ಕಾರವಾದ ಸುಂದರ ಕುಟೀರವು ನಿರ್ಮಿತವಾಗಿತ್ತು. ಇದರಲ್ಲಿ ವಿಷ್ಣುಚಿತ್ತನೆಂಬ ಒಬ್ಬ ಶ್ರೀವೈಷ್ಣವ ಮತದ ಬ್ರಾಹ್ಮಣನಿದ್ದನು. ಈತನು, ಸುಸಂಸ್ಕೃತನೂ, ವಿದ್ಯಾವಂತನೂ, ಸದ್ಗುಣಸಂಪನ್ನನೂ, ಪರಮ ದೈವ ಭಕ್ತನೂ ಆಗಿದ್ದನು. ಈತನಿಗೆ ತಮಿಳು ಭಾಷೆಯಲ್ಲಿ ಹೆಚ್ಚಿನ ಪಾಂಡಿತ್ಯವಿತ್ತು. ಆದ್ದರಿಂದ, ತಮಿಳಿನಲ್ಲಿ ರಂಗನಾಥಸ್ವಾಮಿಯ ಮೇಲೆ ಅನೇಕ ಕೀರ್ತನೆಗಳನ್ನು ರಚಿಸಿದ್ದನು. ಈ ಭಕ್ತಶಿರೋಮಣಿಯನ್ನು ತಮಿಳರು 'ಪೆರಿ ಆಳ್ವಾರ್' ಎಂದು ಕರೆದಿದ್ದಾರೆ.

ವಿಷ್ಣುಚಿತ್ತನಿಗೆ ಬಹಳಕಾಲ ಸಂತಾನ ಪ್ರಾಪ್ತಿಯಾಗಲಿಲ್ಲ. ಈ ಚಿಂತೆಯು ಆಗಾಗ ಈತನನ್ನು ಬಾಧಿಸುತ್ತಿತ್ತು. ಪ್ರತಿ ಮುಂಜಾನೆಯಲ್ಲಿಯೂ ಈತನು ಎದ್ದು ತನ್ನ ಕುಟೀರದ ಸುತ್ತಲೂ ಬೆಳೆಸಿದ್ದ ಗಿಡಗಳಿಂದ ಹೂವನ್ನು ಬಿಡಿಸುತ್ತಿದ್ದನು. ಇವುಗಳನ್ನು ಅಂದವಾಗಿ ಜೋಡಿಸಿ, ಹಾರವನ್ನು ಕಟ್ಟಿ ದೇವರಿಗೆ ಅರ್ಪಿಸುತ್ತಿದ್ದನು. ಒಂದು ದಿನ ಉಷಃಕಾಲದಲ್ಲಿ, ಹೂಗಳನ್ನು ಬಿಡಿಸಲು ನಸುಕಿನಲ್ಲಿಯೇ ತೋಟಕ್ಕೆ ಹೋದನು. ಮಲ್ಲಿಗೆಯ ಲತೆಯ

ಅಡಿಯಲ್ಲಿ ಒಂದು ಅತಿಮುದ್ದಾದ ಶಿಶುವು ಮಲಗಿ ಅಳುತ್ತಿತ್ತು. ಸಂತಾನ ಸುಖವನ್ನೇ ಅನುಭವಿಸದ ವಿಷ್ಣುಚಿತ್ತನಿಗೆ ದೈವಮಾಯೆಯಿಂದ ದೊರೆತ ಶಿಶುವನ್ನು ಕಂಡು ನಿಧಿಕಂಡಂತೆ ಸಂತೋಷಪಟ್ಟನು. ದೊರೆತದ್ದು, ಹೆಣ್ಣು ಶಿಶುವು. ಪುಳಕಿತನಾಗಿ ಮಗುವನ್ನು ಭರದಿಂದ ಎತ್ತಿ, ಎದೆಗವಚಿಕೊಂಡು ಉತ್ಸಾಹಿಯಾಗಿ ಮನೆಗೋಡಿ ಅದನ್ನು ತನ್ನ ಸತಿಗೆ ಒಪ್ಪಿಸಿದನು. ಅಂಧಕಾರವು ಕವಿದಿದ್ದ ಆ ಮನೆಗೆ ಮಿಂಚು ಹೊಕ್ಕಂತಾಯಿತು. ಮಗುವಿಗೆ 'ಗೋದಾ' ಎಂದು ನಾಮಕರಣಮಾಡಿ, ಆದರದಿಂದ ಸಲಹುತ್ತಾಬಂದರು. ಮುದ್ದು ಮಗು, ಗೋದಾ ತನ್ನ ಅಂದಚೆಂದದಿಂದಲೂ, ಬಾಲಲೀಲೆ ಗಳಿಂದಲೂ ತಂದೆತಾಯಿಯರ ಮನಗಳನ್ನು ಸೂರೆಗೊಂಡಿತ್ತು. ಬೆಳೆಯು ತ್ತಿದ್ದ ಗೋದಾ, ತನ್ನ ಸಮವಯಸ್ಸಿನ ಇತರ ಮಕ್ಕಳಂತೆ ಒಂದು ದಿನ ವಾದರೂ ಕುಚೇಷ್ಟೆಗಳಲ್ಲಿ ಉತ್ಸಾಹ ತೋರಲಿಲ್ಲ. ನಡೆದಾಡುವ ಗೋದಾ ಹೂಗಳನ್ನು ಜೋಡಿಸಿಕೊಂಡು ದೇವಮಂದಿರದೊಳಕ್ಕೆ ನಡೆದು, ಹೂಗಳನ್ನು ಗರ್ಭಗುಡಿಯ ಮುಂದೆ ಹರಡಿ ದೇವರನ್ನು ನೋಡುತ್ತಾ ಕುಳಿತುಬಿಡು ತ್ತಿದ್ದಳು. ಬೆಳೆದಂತೆಲ್ಲಾ ಪೂಜೆಯಲ್ಲಿ ಉದ್ಯುಕ್ತನಾಗಿದ್ದ ತಂದೆಯೊಡನೆ ಸೇರಿಕೊಂಡು ಕುಳಿತಿರುತ್ತಿದ್ದಳು. ಆತನು ಭಗವನ್ನಾಮ ಸಂಕೀರ್ತನೆ ಗಳನ್ನು ಹಾಡುವಾಗಲೂ ಬಾಲಕಿ ಗೋದಾ ಆಹಾರ ನಿದ್ರೆಗಳ ಮೇಲಿನ ಅಪೇಕ್ಷೆಯನ್ನು ಬಿಟ್ಟು ತಲ್ಲೀನಳಾಗಿ ಕುಳಿತಿರುತ್ತಿದ್ದಳು. ಹೀಗೆ, ಬಾಲಕಿ ಗೋದಾ ಸ್ವಯಂ–ವಿಷ್ಣುಭಕ್ತಳಾದಳು.

ವಿಷ್ಣುಚಿತ್ತನು ಮಗಳಿಗೆ ಕೆಲವು ಸುಂದರ ಗೀತೆಗಳನ್ನು ಹೇಳಿಕೊಟ್ಟಿ ದ್ದನು. ಆಗಾಗ ಬಾಲಕಿಯು ಇವುಗಳನ್ನು ಮಧುರಮಂಜುಳಧ್ವನಿಯಲ್ಲಿ ಹಾಡುತ್ತಿದ್ದಳು. ಹೀಗಾಗಿ, ಗೋದಾಕುಮಾರಿಯ ಮನದಲ್ಲಿ ವಿಷ್ಣುಭಕ್ತಿಯು ಬೇರೂರಿ ಬದ್ಧಮೂಲವುಳ್ಳದ್ದಾಗಿತ್ತು. ಕೃಷ್ಣನ ಲೀಲೆಯನ್ನು ಕೇಳುತ್ತ ಕೇಳುತ್ತ ಗೋದಾವಿನ ಮನಸ್ಸಿನಲ್ಲಿ ಕೃಷ್ಣನ ಮೇಲೆ ಪ್ರೇಮವು ಅಂಕುರ ವಾಯಿತು. ರಾಧಾಕೃಷ್ಣರ ಪವಿತ್ರವೂ, ಅಮರವೂ, ಉಜ್ವಲವೂ ಆದ ಪ್ರೇಮವು ಗೋದಾವಿನ ಮನಸ್ಸಿನ ಮೇಲೆ ಉತ್ತಮ ಪರಿಣಾಮವನ್ನುಂಟು ಮಾಡಿತು. ಕೃಷ್ಣನಿಗೆ ತಾನು ಅರ್ಹಳೇ ಎಂದು ಗೋದಾವಿನ ಮನದಲ್ಲಿ ಸಂಶಯ ಮೂಡಿತು. ಆಗ, ಎದುರಿಗೆ ರಂಗನಾಥನಿಗೆಂದು ಸಿದ್ಧಪಡಿಸಿಟ್ಟಿದ್ದ

ಹಾರವನ್ನು ತೆಗೆದು ತಾನು ಧರಿಸಿಕೊಂಡು, ಒಂದು ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡು ಪ್ರಸನ್ನಚಿತ್ತಳಾದಳು. ಶೋಭಿಸುವ ತನ್ನ ಸೊಬಗಾಕೃತಿಯು, ಭಗವಂತನಿಗೆ ಒಪ್ಪಿಸಲು ಅರ್ಹತೆಯನ್ನು ಪಡೆದ ಕುಸುಮವೆಂದು ಮನಸ್ಸಿಗೆ ನೆಮ್ಮದಿಯುಂಟಾಯಿತು.

ಮೇಲ್ಕಂಡ ಘಟನೆಯು ನಡೆದ ನಂತರ, ಪ್ರತಿದಿನವೂ ಗೋದಾ ದೇವಿಯು ಹಾರವನ್ನು ಕಟ್ಟಿ, ತನ್ನ ಕೊರಳಿಗೆ ಹಾಕಿಕೊಂಡು, ತೃಪ್ತಿಕರ ವಾಗಿದೆಯೆಂದು ನಿರ್ಧರಿಸಿಕೊಂಡು ಭಗವಂತನೆಡೆಗೆ ಒಯ್ಯುತ್ತಿದ್ದಳು. ಒಂದು ದಿನ, ಇವಳು ದೇವರಿಗೆಂದಿಟ್ಟಿದ್ದ ಹಾರವನ್ನು ಧರಿಸಿಕೊಂಡು, ಕನ್ನಡಿಯ ಮುಂದೆ ನಿಂತು ನೋಡಿ ನಲಿಯುತ್ತಿದ್ದಾಗ, ವಿಷ್ಣುಚಿತ್ತನು ಪ್ರವೇಶಿಸಿದನು. ಇವಳ ಕೃತ್ಯದಿಂದ ಬಹಳ ಕುಪಿತನಾಗಿ, ಧರಿಸಿದ ನಿರ್ಮಾಲ್ಯಹಾರವನ್ನು ದೇವರಿಗೆ ಸಮರ್ಪಿಸುವುದು ಸಮಂಜಸವಲ್ಲವೆಂದು ಮೂದಲಿಸಿ, ಮಗಳನ್ನು ಶಿಕ್ಷಿಸಿದನು. ಆ ಹಾರವನ್ನು ಬದಿಗೆಸೆದು, ಪ್ರತಿ ಯಾಗಿ ಒಂದು ನೂತನ ಹಾರವನ್ನು ರಚಿಸಿ, ರಂಗನಾಥನಿಗೆ ಸಮರ್ಪಿ ಸಿದನು. ಆದರೆ, ಆ ದಿನವೆಲ್ಲಾ ವಿಷ್ಣುಚಿತ್ತನ ಮನಸ್ಸಿನಲ್ಲಿ ಕಸಿವಿಸಿ ಯಾಯಿತು. ರಾತ್ರಿಯಲ್ಲಿ ಆಹಾರವನ್ನು ಸೇವಿಸದೆ, ಕದಡಿದ ಮನಸ್ಸಿ ನಿಂದ ಮಲಗಿದನು. ಅಂದು ರಾತ್ರಿ ಒಂದು ವಿಚಿತ್ರ ಸ್ವಪ್ನ ಕಂಡನು. ಕನಸಿನಲ್ಲಿ ಶ್ರೀರಂಗನಾಥಸ್ವಾಮಿಯು ಪ್ರತ್ಯಕ್ಷನಾಗಿ, ಗೋದಾ ಧರಿಸಿದ ಹಾರವೇ ತನಗೆ ಪರಮಪ್ರಿಯವಾದುದೆಂದು, ಈ ವಿಷಯದಲ್ಲಿ ತನ್ನ ಭಕ್ತಳನ್ನು ನೋಯಿಸತಕ್ಕದ್ದಲ್ಲವೆಂದೂ, ಹೇಳಿದಂತಾಯಿತು. ಧಿಗ್ಗನೆದ್ದು ಕುಳಿತ ವಿಷ್ಣುಚಿತ್ತನಿಗೆ ನಿಜವಾಗಿಯೂ ದೇವರ ದರ್ಶನವಾದಂತೆ ಭಾಸವಾಗಿ, ನಿರ್ದೋಷಿ ಬಾಲಕಿಯನ್ನು ಶಿಕ್ಷಿಸಿದ ತಪ್ಪಿಗಾಗಿ ಮನಃಪೂರ್ವಕವಾಗಿ ಪಶ್ಚಾತ್ತಾಪಪಟ್ಟನು. ಈ ವಿಷಯದಲ್ಲಿ ತನಗೆ ಪರಾಜಯವುಂಟಾಗಿ, ಗೋದಾವರಿಗೇ ಜಯವು ಲಭಿಸಿದ ಆನಂದದಿಂದ ಆಕೆಯನ್ನು 'ಆಂಡಾಳ್' ಎಂದು ಕರೆದನು.

ಗೋದಾದೇವಿಯು ಪ್ರಾಯಸಮರ್ಥಳಾದಳು. ಆದರೆ, ಅವಳ ಮನಸ್ಸಿನಲ್ಲಿ ಇತರ ಯುವತಿಯರಂತೆ ಸಂಸಾರಜೀವನದ ಆಸೆಯು ಅಂಕುರಿಸ ಲಿಲ್ಲ. ಇದಕ್ಕೆ ಪ್ರತಿಯಾಗಿ ರಂಗನಾಥಸ್ವಾಮಿಯ ಮೇಲಿನ ಪ್ರೇಮವು

ವೃದ್ಧಿಗೊಂಡಿತು. ದೇವರಮೇಲೆ ಅನೇಕ ಕೀರ್ತನೆಗಳನ್ನು ರಚಿಸುತ್ತಾ ಬಂದಳು. ವಿಷ್ಣುಚಿತ್ತನು, ಸುರಸುಂದರಿಯಂತಿದ್ದ ಮಗಳಿಗೆ ವಿವಾಹ ಮಾಡಬೇಕೆಂಬ ಇಚ್ಛೆಯಿಂದ ಹಲವಾರು ತರುಣರನ್ನು ಕರೆತಂದು ತೋರಿಸಿದನು. ಅವರೆಲ್ಲರೂ ತನಗೆ ಪರಪುರುಷರೆಂಬ ಭಾವನೆಯಿಂದ ಒಬ್ಬರನ್ನೂ ಮುಖವೆತ್ತಿ ನೋಡಲಿಲ್ಲ. ತನಗೆ ಯಾರನ್ನೂ ವರಸಿ ವಿವಾಹವಾಗುವ ಇಚ್ಛೆ ಇಲ್ಲವೆಂದು ಮುಕ್ತಕಂಠಳಾಗಿ ಹೇಳಿಬಿಟ್ಟಳು. ಶ್ರೀರಂಗನಾಥ ಸ್ವಾಮಿಯ ಮೇಲೆ ಮಗಳು ಇಟ್ಟಿದ್ದ ಉಜ್ವಲ ಪ್ರೇಮವನ್ನು ತಿಳಿದು, ವಿಷ್ಣುಚಿತ್ತನಿಗೆ ಸಖೇದಾಶ್ಚರ್ಯಗಳುಂಟಾದುವು; ತನ್ನ ಏಕಮಾತ್ರ ಕನ್ಯೆಯು ಸನ್ಯಾಸಿನಿಯಾಗುತ್ತಿದ್ದಾಳೆಂದು ಖಿನ್ನನಾದನು. ಕಡೆಗೆ ಆಂಡಾಳ್ ದೇವಿಯ ಶುದ್ಧ ಪ್ರೇಮವೇ ಗೆದ್ದಿತು.

ಒಂದು ದಿನ ತಂದೆ ಮಗಳನ್ನು ಆದರದಿಂದ ಬರಮಾಡಿಕೊಂಡು ಅವಳ ಮನಸ್ಸು ಯಾವ ಮೂರ್ತಿಯಲ್ಲಿ ನೆಟ್ಟಿದೆಯೆಂದು ಕೇಳಿದನು. ಒಡನೆಯೇ, ಆಕೆಯು ಪ್ರಫುಲ್ಲಚಿತ್ತಳಾಗಿ ಮುಗುಳನಗೆಯನ್ನು ಬೀರಿ, ಶ್ರೀರಂಗನಲ್ಲಿ ನೆಲೆಸಿರುವ ರಂಗನಾಥಸ್ವಾಮಿಯ ಮೇಲೆ ಅಚಲವಾದ ಪ್ರೀತಿಯಿರುವುದಾಗಿ ತಿಳಿಸಿದಳು. ಆ ಮರುದಿನವೇ ಮಗಳನ್ನು ಕರೆದುಕೊಂಡು ವಿಷ್ಣುಚಿತ್ತನು ಶ್ರೀರಂಗಕ್ಕೆ ಹೊರಟನು. ಅಂದು ಮಗಳು ಮನೆಯಿಂದ ಹೊರಟಾಗ ಅವಳ ತಾಯಿಗೆ ಬಹಳ ಸಂಕಟವಾಗಿ, ಅದೇ ಸ್ಥಿರ ವಿಯೋಗವೋ ಎಂಬಂತಾಯಿತು. ಮಗಳು ಕಣ್ಮರೆಯಾಗುವವರೆಗೂ, ಕಣ್ಣೀರು ತುಂಬಿದವಳಾಗಿ ನೋಡಿದಳು.

ಶ್ರೀರಂಗಕ್ಕೆ ಬಂದನಂತರ, ಪೂಜಾವೇಳೆಗೆ ಸರಿಯಾಗಿ ಗುಡಿಯಲ್ಲಿ ಪ್ರವೇಶಿಸಿದರು. ತದ್ವೈಕಚಿತ್ತರಾಗಿ ಸ್ವಾಮಿಯನ್ನು ಸ್ತುತಿಮಾಡಿ ಸುಮಧುರವಾಗಿ ಹಾಡಿದರು. ಮಂಗಳಾರತಿಯ ನಂತರ ಒಂದು ವಿಶೇಷ ನಡೆಯಿತು. ಆವೇಶಬಂದಂತೆ ಆಂಡಾಳು ದೇವರೆಡೆಗೆ ಓಡಿದಳು. ಗರ್ಭಗುಡಿಯ ಕಡೆಗೆ ಓಡುತ್ತಿದ್ದ ಅವಳ ಮುಖಭಾವವನ್ನು ಕಂಡು ಯಾರಿಗೂ ಆಕೆಯನ್ನು ತಡೆಯಲಾಗಲಿಲ್ಲ. ಮತ್ತೂ ಆಶ್ಚರ್ಯ ಸಂಗತಿಯೆಂದರೆ, ರಂಗನಾಥಸ್ವಾಮಿಯು ಅವಳನ್ನು ತನ್ನಲ್ಲಿ ಐಕ್ಯಮಾಡಿಕೊಂಡನು. ಅಲ್ಲಿ ನೆರೆದಿದ್ದವರೆಲ್ಲಾ ಆಶ್ಚರ್ಯ ಚಕಿತರಾಗಿ ಆನಂದಬಾಷ್ಪಗಳನ್ನು ಸುರಿಸಿದರು. ವಿಷ್ಣುಚಿತ್ತನಾದರೋ ಪ್ರಜ್ಞೆ ತಪ್ಪಿಬಿದ್ದನು. ಮರುದಿನ ಭಾರವಾದ ಹೃದಯದಿಂದ ಊರಿಗೆ ಮರಳಿ

ಬಂದನು. ಆಂಡಾಳ್‌ದೇವಿಯ ಭಕ್ತಿ-ಪ್ರೇಮಗಳನ್ನು ಕುರಿತು, ತಮಿಳಿನಲ್ಲಿ ಕೃತಿಗಳನ್ನು ರಚಿಸಿ, ' ತಿರುಪ್ಪಾವೈ ' ಎಂದು ಕರೆದಿದ್ದಾರೆ. ಇವುಗಳನ್ನು ಇಂದಿಗೂ ಸಂಗೀತಗಾರರು ಹಾಡಿ ತಣಿಯುತ್ತಾರೆ.

## ಪ್ರಶ್ನೆಗಳು

೧. ಗೋದಾಕುಮಾರಿಯ ಬಾಲ್ಯ ಜೀವನವನ್ನು ವಿವರಿಸಿ.

೨. ' ಗೋದಾವಿನ ಅಚಲಪ್ರೇಮವೇ ಗೆದ್ದಿತು ' ಹೇಗೆ ?

೩. ಆಂಡಾಳ್‌ದೇವಿಯ ಜೀವನಚಿತ್ರವನ್ನು ಹೋಲುವ ಮತ್ತಾವ ಕಥೆಯನ್ನಾದರೂ ಬರೆಯಿರಿ.

# ಪೆಟ್ರೋಲಿಯಂ

ಪ್ರಕೃತಿಯಲ್ಲಿ ಹೇರಳವಾಗಿಯೂ ಸ್ವಾಭಾವಿಕವಾಗಿಯೂ ದೊರೆಯುವ ಉಪಯುಕ್ತ ವಸ್ತುಗಳಲ್ಲಿ 'ಪೆಟ್ರೋಲಿಯಂ' ಎಂಬುದೂ ಒಂದು. ಭೂ-ಗರ್ಭದಲ್ಲಿ ಕಲ್ಲುಗಳ ಮಧ್ಯೆ ಇದು ದೊರೆಯುತ್ತದೆ. ಇದರಂತೆಯೇ ಕಲ್ಲೆಣ್ಣೆ (ಷೆಲ್ ಆಯಿಲ್) ಎಂಬುದೂ ಸಹ ಭೂಗರ್ಭದಲ್ಲಿಯೇ ದೊರೆಯುತ್ತದೆ. ಆದರೆ ಕಲ್ಲೆಣ್ಣೆಯೊಡನೆ ಬೆರೆತಿರುವ ಕಂದು ಬಣ್ಣದ ಕಶ್ಮಲಗಳನ್ನು ಯಾಂತ್ರಿಕ ರೀತ್ಯಾ ಪ್ರತ್ಯೇಕಿಸಬೇಕಾಗುತ್ತದೆ.

ಸ್ವಾಭಾವಿಕವಾಗಿ ದೊರೆಯುವ ಪೆಟ್ರೋಲಿಯಂನ ಬಣ್ಣದಲ್ಲಿ ವೈವಿಧ್ಯತೆಯುಂಟು. ಕೆಲವೆಡೆಗಳಲ್ಲಿ ದೊರೆಯುವ ಎಣ್ಣೆಯು ತೆಳ್ಳಗೂ ವರ್ಣರಹಿತವಾಗಿಯೂ ಇರುತ್ತದೆ; ಮತ್ತೆ ಕೆಲವು ಸ್ಥಳಗಳಲ್ಲಿ ದೊರೆಯುವ ಎಣ್ಣೆಯು ಮಂದವಾಗಿಯೂ, ಕಂದುಬಣ್ಣವುಳ್ಳದ್ದಾಗಿಯೂ ಇರುವುದಲ್ಲದೆ, ಕಪ್ಪು ಮತ್ತು ಹಸಿರು ಬಣ್ಣಗಳಿಂದ ಮಿಳಿತವಾದ ಎಣ್ಣೆಯು ಕೆಲವು ಕಡೆ ದೊರೆಯುವುದುಂಟು. ಈ ಬಣ್ಣಗಳಲ್ಲಿ ಕಂಡುಬರುವ ವ್ಯತ್ಯಾಸವು ಎಣ್ಣೆಯ ಸ್ನಿಗ್ಧತ್ವದ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ಈ ಎಣ್ಣೆಗೆ ತನ್ನದೇ ಆದ ಒಂದು ಅಪೂರ್ವ ವಾಸನೆಯಿದೆ; ಅಲ್ಲದೆ ಇದು ದಹ್ಯವಸ್ತುವೇ ಆಗಿದೆ.

ಕ್ಯಾಸ್ಪಿಯನ್ ಸಮುದ್ರ ಪ್ರದೇಶದ 'ಬಾಕು' ಎಂಬುದು ಪೆಟ್ರೋಲಿಯಂ ದೊರೆಯುವ ಪ್ರಸಿದ್ಧವಾದ ಸ್ಥಳ. ನಾಗರೀಕತೆಯ ಜೀವನದಲ್ಲಿ ಪೆಟ್ರೋಲಿಯಮ್ಮಿನ ಉಪಯೋಗವು ತಿಳಿಯುವುದಕ್ಕೆ ಮುಂಚೆ ಇದನ್ನು 'ಅಮಾನುಷ ಪವಿತ್ರಾಗ್ನಿ' ಎಂದು ಅನೇಕರಿಂದ ಪೂಜಿಸಲ್ಪಡುತ್ತಿತ್ತು. ಏಕೆಂದರೆ ಭೂಗರ್ಭದ ಒಳಪದರಗಳ ಆಂತರಿಕ ಒತ್ತಡವು ಹೆಚ್ಚಾಗಿ ಶಾಖೋತ್ಪತ್ತಿಯಾಗಿ ಎಣ್ಣೆಯು ಹತ್ತಿಕೊಂಡು ಉರಿಯುತ್ತದೆ. ಇಂತಹ ಎಣ್ಣೆಯ ಕುಳಿಗಳು ಬ್ಯಾಬಿಲನ್ ಮತ್ತು ಚೈನಾ ದೇಶಗಳಲ್ಲಿ ಇದ್ದುವೆಂದು ಭೂಗರ್ಭದೊಳಗೆ ಕಂಡುಬರುವ ಅವಶೇಷಗಳಿಂದ ತಿಳಿದುಬಂದಿದೆ. ಬರ್ಮಾದಲ್ಲಿಯೂ




ಭೂಮಿಯೊಳಗಣ ಪದರಗಳಲ್ಲಿರುವ ಪೆಟ್ರೋಲಿಯಂ ಕಣಜ.

ಸಹ ಪೆಟ್ರೋಲಿಯಂ ಬಾವಿಗಳಿವೆ. ಈ ಎಣ್ಣೆಯನ್ನು ಯಂತ್ರಗಳ ಭಾಗ ಗಳನ್ನು ಮೆದುಗೊಳಿಸಲು ಕೀಲೆಣ್ಣೆ ಅಥವಾ ತೈಲವಸ್ತುವನ್ನಾಗಿ ಉಪ ಯೋಗಿಸುತ್ತಾರೆ. ಶುದ್ಧಿಗೊಳಿಸಿದ ಪೆಟ್ರೋಲಿಯಮ್ಮನ್ನು ಔಷಧಿಯಾಗಿಯೂ ಉಪಯೋಗಿಸುತ್ತಾರೆ. 'ವ್ಯಾಸಿಲೈನ್' ಎಂಬ ಮುಲಾಮಿನೊಡನೆಯೂ ಶುದ್ಧವಾದ ಪೆಟ್ರೋಲ್ ಬೆರತಿರುತ್ತದೆ.

ಪೆಟ್ರೋಲಿಯಂ ಎಣ್ಣೆಯು ದ್ರವರೂಪದಲ್ಲಿ ದೊರೆಯುವಂತೆಯೇ, ಅನಿಲ ರೂಪದಲ್ಲಿಯೂ, ಆಸ್ಫಾಲ್ಟ್ ಎಂಬ ಘನರೂಪಿನಲ್ಲಿಯೂ ಸಿಗುತ್ತದೆ. ಕೆಲವು ವಿಜ್ಞಾನಿಗಳ ಅಭಿಪ್ರಾಯದಂತೆ, ಸಮುದ್ರದ ನೀರಿನಲ್ಲಿ ವಾಸಿಸುವ 'ಫೊರಾಮಿನಾಫೊರ' ಎಂಬ ಜೀವಿಗಳ ಅವಶೇಷಗಳ ಸಾವಯುವ ವಸ್ತು ಗಳು ಮಣ್ಣಿನೊಡನೆ ಕಲೆತು ಸಮುದ್ರತಲದಲ್ಲಿ ನಿಂತು, ಕ್ರಮೇಣವಾಗಿ ಭೂಮ್ಯಂತರ ಪದರಗಳೊಳಕ್ಕೆ ತಳ್ಳಲ್ಪಡುತ್ತವೆ. ಅಲ್ಲಿನ ಒತ್ತಡವು ಹೆಚ್ಚಾ ದಂತೆಲ್ಲಾ, ಎಣ್ಣೆಯು ಮಣ್ಣಿನಿಂದ ತೂರಿಬಂದು ಮರಳು, ಹೆಗ್ಗಲ್ಲು ಮತ್ತು ಸಣ್ಣ ಕಲ್ಲುಗಳ ಮೂಲಕ ಹಾದುಬರುತ್ತದೆ. ಈ ವಸ್ತುವಿನಲ್ಲಿ ಅನಿಲವೂ, ಉಪ್ಪು ಮತ್ತು ನೀರೂ ಸಂಮಿಶ್ರಣವಾಗಿ, ಕಲ್ಲುಗಳ ಸಾಲುಗಳ ಮಧ್ಯೆ ಕೊಳದಂತೆ ನಿಲ್ಲುತ್ತವೆ. ಈ ಕಾರಣದಿಂದಲೇ, ಉಪ್ಪು, ನೀರು, ಪೆಟ್ರೋಲಿ ನೊಡನೆ ಇದ್ದೇ ಇರುತ್ತದೆ. ಎಣ್ಣೆಯನ್ನು ಆವರಿಸಿರುವ ಕಲ್ಲುಗಳ ಒತ್ತಡವು ಹೆಚ್ಚಾದಂತೆಲ್ಲಾ, ಶಾಖೋತ್ಪತ್ತಿಯುಂಟಾಗಿ, ನೀರು ಕಾದು ಆವಿಯಾಗಿ ಹೋಗುತ್ತದೆ ಮತ್ತು ಕಲ್ಲುಪ್ಪು ಎಣ್ಣೆಯು ಸುತ್ತಲೂ ಹೆಪ್ಪುಕಟ್ಟಿಕೊಂಡಿರು ತ್ತದೆ.

ಭೂತಲದಲ್ಲಿ ತಂಗಿರುವ ಎಣ್ಣೆಯ ಮೇಲೆ ಸದಾ ಹೆಚ್ಚಿನ ಒತ್ತಡ ವಿರುವುದುಂಟು. ಕಲ್ಲುಪ್ಪಿನ ಪದರಗಳನ್ನೂ, ಕಲ್ಲಿನ ಪದರಗಳನ್ನೂ ಕೆಡವಿದ ಮೇಲೆ ಅನೇಕ ತಿಂಗಳುಗಳವರೆಗೂ ಟನ್ನುಗಳಗಟ್ಟಲೆ ಎಣ್ಣೆಯು ಚಿಮ್ಮುತ್ತದೆ. ಇದು, ರಷ್ಯಾ ದೇಶದ ಎಣ್ಣೆಯ ಬಾವಿಗಳಲ್ಲಿ ಕಂಡುಬರುವ ಸಾಮಾನ್ಯ ವಿಷಯ. ಬಾವಿಯಿಂದ ಚಿಮ್ಮಿಬಂದ ಪೆಟ್ರೋಲಿಯಂಅನ್ನು ವಿಜ್ಞಾನ ರೀತ್ಯಾ ಯಂತ್ರಗಳ ಮೂಲಕ ಶೋಧಿಸುತ್ತಾರೆ. ಶೋಧಿಸಲ್ಪಟ್ಟ ಶುದ್ಧವಾದ ಭಾಗವೇ 'ಪೆಟ್ರೋಲ್'; ಅಶುದ್ಧವಾದ ಭಾಗವೇ ಸೀಮೆಎಣ್ಣೆ. ಶುದ್ಧ ವಾದ ಪೆಟ್ರೋಲನ್ನು ಯಂತ್ರಗಳನ್ನು ನಡೆಸಲು ಉಪಯೋಗಿಸುತ್ತಾರೆ.

ಸೀಮೆಎಣ್ಣೆಯು ಕಬ್ಬಿಣದ ತುಕ್ಕನ್ನು ತೆಗೆಯುವುದಕ್ಕೂ, ಯಂತ್ರೋಪಕರಣ ಗಳನ್ನು ತೊಳೆಯುವುದಕ್ಕೂ, ದೀಪಕ್ಕಾಗಿಯೂ ಉಪಯುಕ್ತವಾಗಿದೆ. ಪ್ರಪಂಚದಲ್ಲಿ ಹೆಚ್ಚು ಬಳಕೆಯಲ್ಲಿರುವ ವಿಮಾನ, ಮೋಟಾರುಗಾಡಿ ಮತ್ತಿತರ ಯಂತ್ರಗಳ ಅಪರಿಮಿತ ಸಂಖ್ಯೆಯನ್ನು ನೋಡಿದರೆ ಪೆಟ್ರೋಲಿನ ಬೆಲೆಯೂ, ಅಗತ್ಯವೂ ನಮಗೆ ಮಂದಟ್ಟಾಗುತ್ತದೆ. ವಾಸ್ತವವಾಗಿಯೂ ಪೆಟ್ರೋಲಿಯಂ ಬಾವಿಗಳನ್ನೊಳಗೊಂಡ ದೇಶವು ಭಾಗ್ಯವುಳ್ಳ ದೇಶವೆನ್ನಬಹುದು. ಸಧ್ಯದಲ್ಲಿ, ಬಹುಭಾಗ ಪೆಟ್ರೋಲು ಉತ್ತರ ಅಮೆರಿಕಾನಿಂದ ರಫ್ತಾಗುತ್ತದೆ. ರುಮೇನಿಯಾ, ಪೆರು, ವೆನಿಜೂಲ, ಡಚ್, ಈಸ್ಟ್ ಇಂಡೀಸ್, ಪರ್ಸಿಯಾ ದೇಶಕ್ಕೆ ಸೇರಿದ ಇರ್ರಾ, ಬರ್ಮಾ ಈ ದೇಶಗಳಲ್ಲಿಯೂ ಸಹ ಪೆಟ್ರೋಲು ರಫ್ತಾಗುತ್ತದೆ. ಕಳೆದ ಎರಡನೇ ಮಹಾಯುದ್ಧದ ಕಾಲದಲ್ಲಿ ಇಂಗ್ಲೆಂಡಿಗೆ ಪೆಟ್ರೋಲ್ ದೊರೆಯದಂತಾಯಿತು. ಆಗ, ಅಲ್ಲಿನ ವಿಜ್ಞಾನಿಗಳು ಭೂತಲವನ್ನು ಪರಿಶೋಧಿಸಿ, ಲಂಕಾಷೈರ್, ನಾಟ್ಟಿಂಗಾಮಷೈರ್ ದೇಶಗಳಲ್ಲಿ ನಾಲ್ಕಾರು ಬಾವಿಗಳ ಸಂಶೋಧನೆ ಮಾಡಿದರು. ವಿಜ್ಞಾನಿಗಳ ಪರಿಶ್ರಮದಿಂದ ಇನ್ನೂ ಹಲವಾರು ಬಾವಿಗಳು ಬೆಳಕಿಗೆ ಬರುವ ಸಂಭವವುಂಟು.

ನಮ್ಮ ಭಾರತ ದೇಶದಲ್ಲಿ, ಸಧ್ಯದಲ್ಲಿ ವರ್ಷ ಒಂದಕ್ಕೆ ಐವತ್ತು ಲಕ್ಷ ಟನ್ನುಗಳಷ್ಟು ಪೆಟ್ರೋಲಿಯಂನ್ನು ಉಪಯೋಗಿಸಲಾಗುತ್ತಿದೆ. ಇನ್ನು ಮುಂದೆ, ಇದರ ಬಳಕೆಯು ಇನ್ನೂ ಹೆಚ್ಚಾಗಿ ವರ್ಷಕ್ಕೆ ನೂರಕ್ಕೆ ಸುಮಾರು ಹತ್ತರಷ್ಟು ಅಧಿಕಗೊಳ್ಳುವ ಸಂಭವವಿದೆ. ಸಧ್ಯದಲ್ಲಿ, ಅಸ್ಸಾಂನಲ್ಲಿರುವ ದಿಗ್ಬಾಯ್, ಭಾರತದಲ್ಲಿ ತೈಲವನ್ನು ಉತ್ಪಾದಿಸುವ ಏಕೈಕ ಕ್ಷೇತ್ರವಾಗಿದೆ. ಈ ತೈಲಕ್ಷೇತ್ರ ಒಂದರಿಂದಲೇ ನಮಗೆ ವರ್ಷಕ್ಕೆ ನಾಲ್ಕು ಲಕ್ಷ ಟನ್ನುಗಳಷ್ಟು ಪೆಟ್ರೋಲಿಯಂ ದೊರಕುತ್ತಿದೆ. ಸಾವಿರದ ಒಂಭೈನೂರ ಅರವೊತ್ತಂದರ (೧೯೬೧) ವೇಳೆಗೆ, ಅಸ್ಸಾಂನಲ್ಲಿ ಹೊ ಸ ದಾ ಗಿ ಪರಿಶೋಧಿಸಲ್ಪಟ್ಟಿರುವ ' ನಹೋರ್ಕಟಿಯಾ, ಹುಗ್ರಿಜನ್ ಮತ್ತು ಮೊರಾನ್ ತೈಲಕ್ಷೇತ್ರ ' ಗಳಿಂದ ಸುಮಾರು ಮೂವತ್ತು ಲಕ್ಷ ಟನ್ನುಗಳಷ್ಟು ಅಶುದ್ಧ ತೈಲವನ್ನು ಉತ್ಪಾದಿಸುವ ನಿರೀಕ್ಷಣೆಯಿದೆ.

ಪಂಜಾಬ್, ಗಂಗಾನದಿ ಕಣಿವೆ ಪ್ರದೇಶ, ಅಸ್ಸಾಂ, ಪಶ್ಚಿಮ ಬಂಗಾಳ, ಗುಜರಾತ್, ಕಚ್, ರಾಜಾಸ್ಥಾನ ಮುಂತಾದೆಡೆಗಳಲ್ಲಿ ಪೆಟ್ರೋಲಿಯಂ



ಪೆಟ್ರೋಲಿಯಂ ಬಾವಿಯಿಂದ. ಎಣ್ಣೆಯು ಚಿಮ್ಮಿ ಬರುವುದು. ಕಶ್ಮಲ ಹತ್ತಿಕೊಂಡು ಉರಿಯುತ್ತಿವೆ.

ದೊರೆಯುವುದೆಂಬ ಸೂಚನೆಯು ವಿಜ್ಞಾನಿಗಳಿಂದ ಬಂದಿದೆ. ಈ ತೈಲಾನ್ವೇಷಣೆಯ ಕಾರ್ಯವು ಶ್ರಮದಾಯಕವಾಗಿರುವುದಲ್ಲದೆ ಹೆಚ್ಚು ಖರ್ಚನ್ನು ಅಪೇಕ್ಷಿಸುತ್ತದೆ. ಪರೀಕ್ಷಾರ್ಥವಾಗಿ, ಪೆಟ್ರೋಲಿಯಂ ಇದೆ ಎಂಬ ಸೂಚನೆಯಿದ್ದಲ್ಲಿ ಒಂದು ಬಾವಿಯನ್ನು ತೋಡಲು ಐವತ್ತು ಲಕ್ಷ ರೂಪಾಯಿ ಬೆಲೆ ಬಾಳುವ ' ರಿಗ್ ' ಎಂಬ ಯಂತ್ರವು ಅತ್ಯವಶ್ಯಕವಾಗಿದೆ. ಅಲ್ಲದೆ, ಭೂಗರ್ಭ ಶಾಸ್ತ್ರರೀತ್ಯಾ, ತೈಲವಿರುವ ಕ್ಷೇತ್ರಗಳನ್ನು ಸೂಚಿಸುವಂತೆ ' ನಕ್ಷೆ ' ಗಳನ್ನು ತಯಾರಿಸಬೇಕಾಗುವುದು. ಭೂಮಿಯೊಳಗೆ ಹುದುಗಿರುವ ಶಿಲೆಗಳ ಸ್ವರೂಪ ಮತ್ತು ರಚನಾಕ್ರಮವನ್ನು ಕೂಲಂಕಷವಾಗಿ ತಿಳಿಯುವುದಕ್ಕಾಗಿ, ಆಳವಾದ ಮತ್ತು ಆಳವಿಲ್ಲದ ರಂಧ್ರಗಳನ್ನು ಕೊರೆಯಬೇಕಾಗಿದೆ. ಇಷ್ಟಾದರೂ, ಈ ಕೇಂದ್ರಗಳಲ್ಲಿ ತೈಲವು ಕಡ್ಡಾಯವಾಗಿ ದೊರೆಯುತ್ತದೆಂಬ ನಿರೀಕ್ಷಣೆಯಿಲ್ಲ. ಆದರೂ, ಧೃತಿಗೆಡದೆ, ನಾವು ತೈಲಾನ್ವೇಷಣ ಕಾರ್ಯದಲ್ಲಿ ತೊಡಗಿ, ಪರದೇಶದಿಂದ ತೈಲವನ್ನು ತರಿಸಿಕೊಳ್ಳಲು ಹಣವನ್ನು ಸುರಿಯುವುದನ್ನು ನಿಲ್ಲಿಸುವುದು ಅತ್ಯಂತ ಅಗತ್ಯವಾಗಿದೆ.

## ಪ್ರಶ್ನೆಗಳು

೧. ಪೆಟ್ರೋಲಿಯಂ ದೊರೆಯುವ ಬಗೆಯನ್ನು ವಿವರಿಸಿ.

೨. ಪೆಟ್ರೋಲಿಯಂ ಬಾವಿಗಳಿರುವ ದೇಶಗಳಾವುವು ?

೩. ಪೆಟ್ರೋಲಿಯಂ ತೈಲದ ಉಪಯೋಗಗಳಾವುವು ?

೪. ಪೆಟ್ರೋಲಿಯಂ ತೈಲಕ್ಕೂ ಸಿಮೆಎಣ್ಣೆಗೂ ಇರುವ ವ್ಯತ್ಯಾಸ ವೇನು ?

# ಭಾರತದ ಕೋಗಿಲೆ

೧೮೭೯ನೇ ಇಸವಿ, ಮಾಘ ಮಾಸದ ಶುದ್ಧ ತ್ರಯೋದಶಿ ಬುಧವಾರ ಉಷಃಕಾಲದಲ್ಲಿ ಸರೋಜಿನಿದೇವಿಯು ಜನ್ಮ ಧಾರಣೆ ಮಾಡಿದಳು. ಈಕೆಯ ತಂದೆ ಬ್ರಾಹ್ಮಣ ಮತದವನು. ಈತನು ಕಾವ್ಯಗಳಲ್ಲಿ ಅತ್ಯಂತ ಅಭಿರುಚಿಯುಳ್ಳ ಕಲಾಭಿಮಾನಿ; ಅಲ್ಲದೆ ಸಂಸ್ಕೃತದಲ್ಲಿ ಅಮೋಘವಾದ ಪಾಂಡಿತ್ಯವಿತ್ತು. ಆದ್ದರಿಂದಲೇ ಉಪನಿಷತ್ತುಗಳನ್ನು ಅರ್ಥಸಹಿತವಾಗಿ ವ್ಯಾಸಂಗಮಾಡಿಕೊಂಡಿದ್ದರು. ಇಷ್ಟಲ್ಲದೆ, ತತ್ವಶಾಸ್ತ್ರದಲ್ಲಿ ಪ್ರಾಜ್ಞರಾಗಿದ್ದರು. ಹಾಗೂ ಸರಳಜೀವಿ. ಹೈದರಾಬಾದಿನ ನೈಜಾಂ ಕಾಲೇಜನ್ನು ಸ್ಥಾಪಿಸಿದ ಮಹಾನುಭಾವನು ಈತನೇ. ಇನ್ನು, ಸರೋಜಿನಿದೇವಿಯ ತಾಯಿಯಾದರೋ ಹುಟ್ಟು ಕಲಾವಿದೆ. ಬಂಗಾಳಿ ಮನೆತನದ ಈಕೆಯು ತಕ್ಕಮಟ್ಟಿಗೆ ವಿದ್ಯಾವಂತಳಾಗಿದ್ದಳಲ್ಲದೆ ಸುಸಂಸ್ಕೃತಳೂ ಆಗಿದ್ದಳು. ಬಾಲ್ಯದಿಂದಲೂ ಈಕೆಯು ಬಂಗಾಳಿ ಗೀತೆಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದಳು; ಅಲ್ಲದೆ, ಕೆಲವು ಬಂಗಾಳೀ ಗೀತೆಗಳನ್ನು ರಚಿಸಿದ್ದಳು. ಇಂತಹ ಮಾತಾಪಿತೃಗಳು ಜನ್ಮವಿತ್ತ ಸರೋಜಿನಿದೇವಿ ಲೋಕವಿಖ್ಯಾತಳಾದ ಕವಯಿತ್ರಿಯಾಗಿ, ನೋಬೆಲ್ ಪಾರಿತೋಷಕವನ್ನು ಪಡೆದು, ಭಾರತದ ಕೋಗಿಲೆಯೆಂದು ಬಿರುದುಪಡೆದದ್ದು ಏನೂ ಅತಿಶಯವಿಲ್ಲ.

ಸರೋಜಿನಿಯು ಕುಶಾಗ್ರಮತಿಯೂ, ಚಟುವಟಿಕೆಯೂ ಉಳ್ಳ ಬಾಲಕಿಯಾಗಿದ್ದಳು. ಇವಳ ವಿದ್ಯಾಭ್ಯಾಸವು ಶಿಸ್ತಿನಿಂದಲೇ ಆರಂಭವಾಗಿ ಸುಗಮವಾಗಿ ನಡೆಯುತ್ತಿತ್ತು. ಕೇವಲ ಎಂಟು–ಹತ್ತು ವರ್ಷಗಳು ತುಂಬಿದ ಬಾಲಕಿಯಾದಾಗಿನಿಂದಲೂ ಪದ್ಯಗಳನ್ನು ರಚಿಸಬಲ್ಲವಳಾಗಿದ್ದಳು. ತನ್ನ ಹನ್ನೆರಡನೆಯ ವಯಸ್ಸಿನಲ್ಲಿಯೇ ಮದ್ರಾಸ್ ಮೆಟ್ರಿಕ್ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣಳಾದಳು. ಬಳಿಕ ಮತ್ತೆರಡು ವರ್ಷಗಳ ವಿದ್ಯಾಭ್ಯಾಸವು ಮುಂದುವರೆದು, ಹೈದರಾಬಾದ್ ಸಂಸ್ಥಾನದ ವಿದ್ಯಾರ್ಥಿವೇತನವನ್ನು ಪಡೆದವಳಾಗಿ, ತನ್ನ ಹದಿನೈದನೆಯ ವರ್ಷದಲ್ಲಿ ವಿಲಾಯಿತಿಗೆ ಪ್ರಯಾಣ ಬೆಳಸಿದಳು. ಲಂಡನ್–ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಲ್ಲಿ,

ಈಕೆಯ ವ್ಯಾಸಂಗವು ಮುಂದುವರೆಯಿತು. ತಾಯಿತಂದೆಗಳ ವಿಯೋಗ, ಪಾಶ್ಚಾತ್ಯ ದೇಶದ ವಾಯುಗುಣ, ಆಹಾರದ ಬದಲಾವಣೆ ಇವುಗಳ ಪರಿಣಾಮವಾಗಿ, ಆಕೆಯ ಆರೋಗ್ಯವು ಕೆಟ್ಟಿತು. ಆದರೂ, ವ್ಯಾಸಂಗದಲ್ಲಿ ಅನಾಸಕ್ತಿ ತೋರದೆ, ಸದಾ ಹರ್ಷಚಿತ್ತಳಾಗಿಯೇ ಸರೋಜಿನಿಯು ಜೀವನವನ್ನು ಸಾಗಿಸುತ್ತಿದ್ದಳು. ಕಾಲೇಜಿನ ವಿವಿಧ ಕಾರ್ಯ ಚಟುವಟಿಕೆಗಳಲ್ಲಿ ತಪ್ಪದೆ ಭಾಗವಹಿಸಿ ಪ್ರತಿ ಪ್ರಾಧ್ಯಾಪಕರ ಮನ್ನಣೆಗೂ, ಆದರಕ್ಕೂ ಪಾತ್ರಳಾಗಿದ್ದಳು. ಅಲ್ಲಿನ ಪಾಠಗಳಲ್ಲೆಲ್ಲಾ ಆಂಗ್ಲಭಾಷಾ ಸಾಹಿತ್ಯವು ಅದರಲ್ಲಿಯೂ ಪದ್ಯಭಾಗವು ಈಕೆಯ ಮನಸ್ಸನ್ನು ಸೂರೆಗೊಂಡಿತ್ತು. ಬಿಡುವು ದೊರೆತಾಗಲೆಲ್ಲಾ, ಪಾಶ್ಚಾತ್ಯ ಕವಿ ಸಾರ್ವಭೌಮರ ಜೀವನ ಚರಿತ್ರೆಗಳನ್ನೂ, ಅವರಿಂದ ರಚಿಸಲ್ಪಟ್ಟ ಕಾವ್ಯ ಭಾಗಗಳನ್ನೂ ಹೆಚ್ಚು ಶ್ರದ್ಧೆಯಿಂದ ಓದಿಕೊಳ್ಳುತ್ತಿದ್ದಳು. ಅಲ್ಲದೆ, ಸಣ್ಣಪುಟ್ಟ ಕವನಗಳನ್ನೂ ಆಂಗ್ಲಭಾಷೆಯಲ್ಲಿ ಬರೆಯುತ್ತಿದ್ದಳು.

ಇಂಗ್ಲೆಂಡಿನಲ್ಲಿ ವಿದ್ಯಾಭ್ಯಾಸವು ಮುಗಿದು ಪದವೀಧರಳಾದ ನಂತರ, ಕಲೆಗೆ ತೌರೂರೆನಿಸಿದ ಇಟಲಿಗೆ ತೆರಳಿದಳು. ಅಲ್ಲಿ ಹಲವಾರು ಕಾವ್ಯಗಳನ್ನು ಪರಿಶೀಲಿಸಿ, ಓದಿಕೊಂಡಳು. ಅನೇಕ ಸುಮಧುರ ಗೀತೆಗಳನ್ನು ಓದಿ, ಅವುಗಳ ತಿರುಳನ್ನೂ ಲಾಲಿತ್ಯವನ್ನೂ ಆಸ್ವಾದಿಸಿದಳು. ಆ ಬಳಿಕ ಅನೇಕ ಪದ್ಯಗಳನ್ನು ಸುಂದರವಾಗಿ ರಚಿಸಿ ಕೀರ್ತಿಯನ್ನು ಗಳಿಸಿದಳು. ಈ ಸಂದರ್ಭದಲ್ಲಿಯೇ ಆಕೆಗೆ ನೋಬೆಲ್ ಪಾರಿತೋಷಕವು ದೊರೆಯಿತು.

೧೯೦೮ ರಲ್ಲಿ ಮಾತೃಭೂಮಿಗೆ ಮರಳಿ ಬಂದು, ಹೈದರಾಬಾದಿನಲ್ಲಿ ನೆಲಸಿದಳು. ಅಲ್ಲಿಂದ ಮುಂದಕ್ಕೆ ಸಮಾಜ ಸೇವೆಯಲ್ಲಿ ತತ್ಪರಳಾದಳು. ಅನೇಕ ಕಾರ್ಯಕಾರಕ ಸಂಘಗಳ ಮುಖಂಡಳಾಗಿಯೂ, ಮಹಿಳಾ ಸಂಘದ ಕಾರ್ಯದರ್ಶಿನಿಯಾಗಿಯೂ ನಿಂತು ದುಡಿದಳು. ೧೯೨೫ ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಪ್ರಥಮ ಮಹಿಳಾಧ್ಯಕ್ಷಿಣಿಯಾಗಿ ಚುನಾಯಿಸಲ್ಪಟ್ಟಳು. ಅಲ್ಲಿಂದ ಮುಂದೆ, ಗಾಂಧೀಜಿಯ ಭಕ್ತಳಾಗಿ ಭಾರತದ ಸ್ವಾತಂತ್ರ್ಯಕ್ಕೆ ನಿರಂತರವಾಗಿ ಹೋರಾಡಿದಳು. ಈ ಹೋರಾಟದಲ್ಲಿ, ಸೆರೆಮನೆಯ ವಾಸವನ್ನೂ ಅನುಭವಿಸಬೇಕಾಯಿತು. ಹೇಗೂ, ಧೃತಿಗೆಡದೆ ಸಿಂಹಿಣಿಯಂತೆ ದೊಡ್ಡ ದೊಡ್ಡ ಸಭೆಗಳಲ್ಲಿ ಘೋಷಿಸಿ ಮಾತನಾಡಿ

ಹುರಿದುಂಬಿಸುತ್ತಿದ್ದಳು. ಈ ರಾಷ್ಟ್ರೀಯ ಚಳುವಳಿಯಲ್ಲಿಯ ಜೀವನ ದಲ್ಲಿಯೂ ಕಾವ್ಯರಚನೆಯನ್ನು ಬಿಡಲಿಲ್ಲ.

ಸರೋಜಿನಿಯು ಬರೆದ ಕವನಗಳಲ್ಲಿ, 'ಜೋಗುಳ, ಬಳೆಗಾರ, ಬೋಯಿಕಾರರು, ಕಾರಮಂಡಲದ ಬೆಸ್ತ, ಕಮಲಜೆ-ಲಕ್ಷ್ಮಿ, ರಾಣಿಯ ಎದುರಾಳಿ ಇವೇ ಮುಂತಾದುವು ಅತಿ ಮುದ್ದಾದ ಪುಟ್ಟ ಕವನಗಳು. ಇವು ಗಳಲ್ಲಿ ಬಹುಮಟ್ಟಿಗೆ ಆಕೆಯು ವಿದೇಶದಲ್ಲಿದ್ದಾಗಲೇ ಬರೆಯಲ್ಪಟ್ಟವು. ಹೀಗೆ, ಭಾರತಕ್ಕೆ ಸರಿಹೋಗುವ ಅಥವಾ ಹೊಂದುವ ವಿಷಯಗಳನ್ನು ಆರಿಸಿಕೊಳ್ಳು ವಂತೆ ಬೋಧಿಸಿದವರು ಅವರ ಗುರುಗಳಲ್ಲಿ ಒಬ್ಬರಾದ ಎಡ್ಮಂಡ್ ಗಾಸೆ, ಎಂಬುವ ವಿಮರ್ಶಕಾರರು. ಈ ಕವನಗಳೆಲ್ಲವೂ ಇಂದಿಗೂ ಜನಪ್ರಿಯ ವಾಗಿವೆ.

ಭಾರತದ ಸ್ವಾತಂತ್ರ್ಯ ಸಾಧನೆಗಾಗಿ ನಿರಂತರವಾಗಿ ಆಕೆಯು ಹೋರಾ ಡಿದಳು. ಸ್ವತಂತ್ರ ಭಾರತದಲ್ಲಿ, ಉತ್ತರ ಪ್ರದೇಶದ ರಾಜ್ಯಪಾಲಳಾಗಿ ಆರಿಸಲ್ಪಟ್ಟಳು. ಉದಾತ್ತಜೀವಿ, ಪ್ರತಿಭಾವಂತಳೂ, ಜನಪ್ರಿಯಳೂ ಆದ ಕೋಗಿಲೆಯ ಜ್ಯೋತಿಯು ೧೯೪೯ರಲ್ಲಿ ನಂದಿಹೋಯಿತು.

## ಪ್ರಶ್ನೆಗಳು

೧. ಸರೋಜಿನಿದೇವಿಯ ವಿದ್ಯಾಭ್ಯಾಸ ಕ್ರಮವೇನು ?

೨. 'ಭಾರತದ ಕೋಗಿಲೆ' ಎಂದು ಸರೋಜಿನಿಗೆ ಹೆಸರು ಸಾರ್ಥಕ ವಾಗಿದೆಯೇ ?

೩. ಈಕೆಯ ವಿವಿಧ ಕವನಗಳಾವುವು ?

# ಲೋಹರಾಜ

ಭೂಮಾತೆಯು ವರಪಾಲಿಸಿರುವ ಅತ್ಯಂತ ಉಪಯುಕ್ತವಾದ ವಸ್ತುಗಳಲ್ಲಿ ಕಬ್ಬಿಣವೂ ಒಂದು. 'ಬಣ್ಣದಲ್ಲಿ ಕಪ್ಪು, ಗುಣದಲ್ಲಿ ಒಪ್ಪು' ಎಂಬಂತೆ ಈ ಲೋಹವು ನೋಡಲು ಅಂದವಾಗಿಲ್ಲದಿದ್ದರೂ ಉಪಯೋಗದಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಸಾಮಾನ್ಯ ಬೆಲೆಯುಳ್ಳ ಈ ಲೋಹವನ್ನು ಕಳ್ಳರಿಗೆ ಹೆದರಿ ಯಾರೂ ಪೆಟ್ಟಿಗೆಯಲ್ಲಿ ಭದ್ರಪಡಿಸುವ ಯೋಚನೆಯನ್ನು ಮಾಡುವುದಿಲ್ಲ. ನಮ್ಮ ಜೀವನೋಪಾಯಕ್ಕೂ, ಭೋಗಕ್ಕೂ ಅತ್ಯವಶ್ಯಕವಾದ ವಸ್ತುಗಳನ್ನು ಪಡೆಯುವುದಕ್ಕೂ ಈ ಕಬ್ಬಿಣದ ಸಹಾಯದಿಂದಲೇ. ಅಷ್ಟೇಕೆ, ನಾವು ಇಂದು ಸುಖ ಭೋಜನವನ್ನು ಮಾಡುತ್ತಿರುವುದೂ ಕಬ್ಬಿಣದ ಸಹಾಯದಿಂದಲೇ. ಅಷ್ಟೈಶ್ವರ್ಯದ ಹೆಗ್ಗುರುತುಗಳಾದ ವಜ್ರ, ಮುತ್ತು, ರತ್ನ, ಭಂಗಾರ ಮುಂತಾದುವುಗಳನ್ನು ಪಡೆಯುವುದಕ್ಕೂ ಕಬ್ಬಿಣದ ಒತ್ತಾಸೆಯು ಅತ್ಯಗತ್ಯವಾಗಿದೆ.

ಪ್ರಕೃತಿಯಲ್ಲಿ ಕಬ್ಬಿಣವು ಯಥೇಚ್ಛವಾಗಿ ದೊರೆಯುತ್ತದೆ. ಆದರೆ, ಇದಕ್ಕೆ ತೇವಾಂಶದಿಂದ ಕೂಡಿದ ಗಾಳಿಯು ಸೋಕುತ್ತ ಬಂದಂತೆಲ್ಲಾ ತುಕ್ಕು ಹಿಡಿಯುತ್ತದೆ. ಹೀಗಾಗಿ, ಈ ಲೋಹವು ಸ್ವತಂತ್ರವಾಗಿ ದೊರೆಯುವದೇ ಅಪೂರ್ವ. ಇತರ ವಸ್ತುಗಳೊಂದಿಗೆ ಬೆರತು ಅದಿರಿನ ರೂಪದಲ್ಲಿ ಭೂ-ಗರ್ಭದಲ್ಲಿ ದೊರೆಯುತ್ತದೆ. ಆದ್ದರಿಂದ ಇದಕ್ಕೆ ಖನಿಜವೆಂದು ಹೆಸರು (ಖನಿ ಎಂದರೆ ಗಣಿಯಲ್ಲಿ, ಜ-ಹುಟ್ಟುವುದು ಎಂದರ್ಥ). ಇದೂ ಅಲ್ಲದೆ ಪ್ರಾಣಿಗಳ ರಕ್ತದಲ್ಲಿಯೂ ಕಬ್ಬಿಣಾಂಶವು ಸಂಯೋಗವಾಗಿದೆ. ಗಿಡಗಳು ಹಸಿರು ಬಣ್ಣವಾಗಿರುವುದಕ್ಕೂ ಕಬ್ಬಿಣಾಂಶವು ಅದರಲ್ಲಿ ಅಡಗಿರುವುದೇ ಕಾರಣ.

ಕಬ್ಬಿಣದ ಅದುರು ವಿವಿಧ ಆಕಾರಗಳನ್ನೂ, ಬಣ್ಣಗಳನ್ನೂ ಹೊಂದಿರುತ್ತದೆ. ಸಾಮಾನ್ಯವಾಗಿ ಈ ಅದುರಿನಲ್ಲಿ ಬೆರತಿರುವ ವಸ್ತುಗಳು ಗಂಧಕ ಮತ್ತು ಇಂಗಾಲ. ಅಲ್ಲದೆ, ಇವುಗಳೊಡನೆ ಕಲ್ಲು ಮತ್ತು ಮಣ್ಣು ಮಿಶ್ರ

ವಾಗಿರುವುದೂ ಉಂಟು. ಪ್ರಪಂಚದ ಅನೇಕ ಭಾಗಗಳಲ್ಲಿ ಕಬ್ಬಿಣದ ಅದುರು ದೊರೆಯುತ್ತವೆ. ಇಂಗ್ಲೆಂಡ್, ಸ್ಪೈಯಿನ್, ಸ್ವೀಡನ್ ಮುಂತಾದ ದೇಶಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ. ನಮ್ಮ ಮೈಸೂರು ದೇಶದಲ್ಲಿ, ಭದ್ರಾವತಿಯ ಬಳಿಯಿರುವ ಕೆಮ್ಮಣ್ಣುಗುಂಡಿಯಲ್ಲಿ ಈ ಅದಿರು ಹೇರಳವಾಗಿ ದೊರೆಯುತ್ತದೆ.

ಕಬ್ಬಿಣವನ್ನು ಪಡೆಯಲು ಅದುರುಗಳನ್ನು ಶುಷ್ಕ ಶಾಖ (ದ್ರವರಹಿತವಾದ ಶಾಖ) ದಿಂದ ಬೇಯಿಸಿ, ಅವುಗಳಲ್ಲಿ ಅಡಗಿರುವ ಗಂಧಕ, ರಂಜಕ, ಇಂಗಾಲ ಇವುಗಳನ್ನು ಆವಿಯಾಗಿ ಹೊರಡಿಸುತ್ತಾರೆ. ನಂತರ, ಸುಣ್ಣಕಲ್ಲುಗಳೊಡನೆ ಬೆರಸಿ ಬ್ಲಾಸ್ಟ್‌ಫರ್ನೆಸ್ ಎಂಬ ಯಂತ್ರ (ಇದು ೫೦ ಅಡಿಗಳಿಂದ ೧೫೦ ಅಡಿಗಳವರೆಗೂ ಎತ್ತರವಾಗಿರುತ್ತದೆ) ದೊಳಗೆ ಹರವುತ್ತಾರೆ. ಇದರ ಹಿಂದೆ ಮತ್ತು ಮುಂದೆ ಕೋಕ್ ಎಂಬ ಚಿಪ್ಪಿದ್ದಿಲಿನ ಸಾಲುಗಳಿರುತ್ತವೆ. ಫರ್ನೆಸ್ ಯಂತ್ರದ ತಳಭಾಗದ ಕಡೆಯಿಂದ ಗಾಳಿಯು ರಭಸದಿಂದ ಪ್ರವೇಶಿಸಲು ಅನುಕೂಲವಿರುತ್ತದೆ. ಕೋಕ್ ಹತ್ತಿಕೊಂಡು ಉರಿದಂತೆಲ್ಲಾ ಇಂಗಾಲಾಮ್ಲವು ಅಧಿಕ ಪ್ರಮಾಣದಲ್ಲಿ ಬಿಡುಗಡೆಯಾಗುತ್ತದೆ. ಸುಣ್ಣಕಲ್ಲು ಗಂಧಕ ಮತ್ತು ರಂಜಕಗಳನ್ನು ಹೀರಿಕೊಳ್ಳುತ್ತದೆ. ಇವೆಲ್ಲಾ ಮಿಶ್ರವಾಗಿ 'ಸ್ಲ್ಯಾಗ್' ಎಂದು ಕರೆಯಲ್ಪಡುತ್ತದೆ. ಇದೂ, ಕಬ್ಬಿಣವೂ ದ್ರವವಾಗಿ ಹರಿಯುತ್ತವೆ. ಆದರೆ ಕಬ್ಬಿಣ ದ್ರವವು ಭಾರವಾಗಿರುವುದರಿಂದ ತಳಭಾಗಕ್ಕೆ ಬಂದು ನಿಲ್ಲುತ್ತದೆ. ಇದನ್ನು ಮರದ ದಿಬ್ಬಗಳ ಮೇಲೆ ಹಾಯಿಸಿಕೊಳ್ಳುತ್ತಾರೆ. ಇದನ್ನು ಮತ್ತೆ ಕಾಯಿಸಿ ಕೆಂಡದಂತೆ ಹೊಳೆಯುವಾಗ ಸುರಿದುಕೊಂಡು ಇಷ್ಟವುಳ್ಳ ಆಕಾರಕ್ಕೆ ಎರಕಹೊಯ್ದುಕೊಳ್ಳುತ್ತಾರೆ. ಇಂತಹ ಕಬ್ಬಿಣದಿಂದ ರೈಲ್ವೆ ಕಂಬಿಗಳನ್ನೂ, ಇಕ್ಕಳ, ಒಲೆ, ಬಾಣಲೆ, ಹೆಂಚು, ಮನೆ ಕಟ್ಟಲು ಬೇಕಾಗುವ ಕಬ್ಬಿಣದ ತೊಲೆಗಳು, ರೈತನ ಉಪಕರಣಗಳಾದ ನೇಗಿಲು, ಗುದ್ದಲಿ, ಬಾಚಿ, ಮಚ್ಚು ಮುಂತಾದ ಆಯುಧಗಳನ್ನು ತಯಾರಿಸುತ್ತಾರೆ.

ತಾಂಡವಾಳವೆಂಬುದೂ ಸಹ ಎರಕಹೊಯ್ದ ಕಬ್ಬಿಣದಿಂದಲೇ ತಯಾರಿಸುತ್ತಾರೆ. ಎರಕ ಕಬ್ಬಿಣವನ್ನು ಮತ್ತೊಂದು ವಿಧವಾದ ಫರ್ನೆಸ್‌ನಲ್ಲಿ ಕಾಯಿಸುತ್ತಾರೆ. ಇದರೊಳಕ್ಕೆ ರಭಸವಾಗಿ ಗಾಳಿ ಬೀಸಲು ಸಾಧಕವಿರುತ್ತದೆ. ಈ

ವಿಧಾನದಿಂದ, ಕಬ್ಬಿಣದೊಡನೆ ಬೆರತು ಉಳಿದಿರುವ ಇಂಗಾಲವು ಉರಿದು ಇಂಗಾಲಾಮ್ಲವಾಗಿ ಪರಿಣಮಿಸಿ ಹೊರಕ್ಕೆ ಬಂದು ವಾಯುಮಂಡಲದಲ್ಲಿ ಬೆರೆಯುತ್ತದೆ. ನಂತರ ಕರಗಿದ ಕಬ್ಬಿಣವನ್ನು ಸಣ್ಣ ಕೊಳವೆಗಳ ಮೂಲಕ ಹಾಯಿಸಿ, ಬೇಕಾದ ಆಕಾರಕ್ಕೆ ಅಚ್ಚುಹಾಕಿಕೊಂಡು ಸುತ್ತಿಗೆಯಿಂದ ಕತ್ತರಿಸುತ್ತಾರೆ. ಇದೇ ಶುದ್ಧವಾದ ಕಬ್ಬಿಣ. ಇದು ಮೃದುವಾಗಿರುತ್ತದೆ. ಅಕ್ಕಸಾಲಿಗನ ಉಪಕರಣಗಳೆಲ್ಲಾ ತಾಂಡವಾಳದಿಂದ ತಯಾರಿಸಲ್ಪಡುತ್ತವೆ.

'ಉಕ್ಕು' ಎಂಬುದೂ ಕಬ್ಬಿಣದ ಮತ್ತೊಂದು ಪ್ರಭೇದ. ತಾಂಡವಾಳವನ್ನು ಇಂಗಾಲದೊಡನೆ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಬೆರೆಯುವಂತೆ ಮಾಡಿ, ಅದರ ಮೇಲೆ ಗಾಳಿಯನ್ನು ಹಾಯಿಸುತ್ತಾರೆ. ಬಳಿಕ ಕಾದ ಉಕ್ಕನ್ನು ಜೇಡಿಮಣ್ಣಿನಿಂದ ಕೂಡಿದ ಕಬ್ಬಿಣದ ಪಾತ್ರೆಯೊಳಕ್ಕೆ ಸುರಿದು, ಗಟ್ಟಿಮಾಡುತ್ತಾರೆ. ಇದು ಬಹಳ ಗಟ್ಟಿ. ಇದರಿಂದಲೇ ಮನೆಗೆ ಬೇಕಾಗುವ ಕತ್ತರಿ, ಚಾಕು, ಸೂಜಿ ಮುಂತಾದ ಉಪಕರಣಗಳನ್ನೂ, ಹಲವಾರು ಯಂತ್ರದ ಸಾಮಾನುಗಳನ್ನೂ ತಯಾರಿಸುತ್ತಾರೆ. ಮತ್ತೂ 'ಹದಗೊಳಿಸಿದ' ಉಕ್ಕಿನಿಂದ ಪಾತ್ರೆಗಳನ್ನೂ ಉತ್ತಮ ಯಂತ್ರದ ಉಪಕರಣಗಳನ್ನೂ ತಯಾರಿಸುತ್ತಾರೆ. ಹದಗೊಳಿಸಿದ ಉಕ್ಕಿನ ವಸ್ತುಗಳು ಬೆಳ್ಳಿಯಂತೆ ಹೊಳೆಯುತ್ತವೆ. ಇವಕ್ಕೆ ತುಕ್ಕುಹಿಡಿಯುವುದಿಲ್ಲ. ಉಕ್ಕಿನ ಪಾತ್ರೆಗಳಿಗೆ ಕಲಾಯಿ ಮಾಡಿಸಬೇಕಾಗಿಲ್ಲ; ಅಲ್ಲದೆ ಇವು ಬಹುಕಾಲ ಬಾಳಿಕೆಗೆ ಬರುತ್ತವೆ.

ಒಟ್ಟಿನಲ್ಲಿ ಕಬ್ಬಿಣದಿಂದ ಉಂಟಾಗುವ ಪ್ರಯೋಜನಗಳನ್ನು ಎಣಿಸಲು ಸಾಧ್ಯವಿಲ್ಲವೆನ್ನಬಹುದು. ರೈತ, ಕಮ್ಮಾರ, ಚಮ್ಮಾರ, ಕಲ್ಲುಕಟಿಗ, ಅಕ್ಕಸಾಲೆ, ಮರಗೆಲಸದವನು, ಇವರುಗಳ ಉಪಕರಣಗಳು, ವಿದ್ಯುಚ್ಛಕ್ತಿಯ ಯಂತ್ರಗಳು ಮುಂತಾದುವುಗಳೆಲ್ಲವೂ ಕಬ್ಬಿಣದಿಂದಲೇ ತಯಾರಾಗುತ್ತವೆ. ಹೀಗೆ, ಕಬ್ಬಿಣವು ಮಾನವನ ಉಪಭೋಗಕ್ಕೆ ಸಹಾಯಕವಾಗಿದೆಯಾದರೂ, ಮಾನವನ ವಿನಾಶಕ್ಕೂ ಕಾರಣವಾದ ಯುದ್ಧಸಾಮಗ್ರಿಗಳನ್ನು ಅಂದರೆ ಕತ್ತಿ, ಗುರಾಣಿ, ಈಟಿ, ಭಲ್ಲೆಯ ಮತ್ತು ಬಂದೂಕು ಮುಂತಾದ ಕ್ರೂರವಾದ ಆಯುಧಗಳು ಈ ಕಬ್ಬಿಣದಿಂದಲೇ ತಯಾರಾಗುತ್ತವೆಂಬ ಸಂಗತಿಯನ್ನು ಯಾರೂ ಮರೆಯಲಾಗದು.

## ಪ್ರಶ್ನೆಗಳು

೧. ಕಬ್ಬಿಣವು ಪ್ರಕೃತಿಯಲ್ಲಿ ಹೇಗೆ ದೊರೆಯುತ್ತದೆ ? ಇದರೊಡನೆ ಬೆರತಿರುವ ಇತರ ವಸ್ತುಗಳಾವುವು ?

೨. ಕಬ್ಬಿಣದ ಇತರ ಪ್ರಭೇದಗಳಾವುವು ?

೩. ಉಕ್ಕಿನ ಉಪಯೋಗವನ್ನು ತಿಳಿಸಿ.

# ಸುಂದರ-ರೇಷ್ಮೆ

ನಮ್ಮ ದೇಶದಲ್ಲಿ ನಡೆಯುವ ಶುಭಕಾರ್ಯಗಳು, ಹಬ್ಬಗಳು ಮುಂತಾದ ವಿಶೇಷ ದಿನಗಳಲ್ಲಿ ಹೆಂಗಸರು, ಬಾಲಕಿಯರು ಧರಿಸುವ ಜರತಾರಿ ಪೀತಾಂಬರ, ಪಟ್ಟೆಸೀರೆ, ಕಿರಿಗೆ, ಲಂಗ, ಇವುಗಳ ಆಡಂಬರವೇ ಹೆಚ್ಚಾಗಿ ಕಂಡುಬರುತ್ತವೆ. ದೊಡ್ಡ ನಗರಗಳ ಪೇಟೆಗಳಲ್ಲಿ ಕಣ್ಣು ಮನಗಳನ್ನು ಸೆಳೆಯುವಂತೆ ಜರತಾರಿ ಬಟ್ಟೆಗಳನ್ನು ವೈವಿಧ್ಯತೆಯಿಂದ ಜೋಡಿಸಿರುವುದನ್ನು ನಾವು ಪ್ರತಿನಿತ್ಯವೂ ನೋಡುತ್ತಲಿದ್ದೇವೆ. ಹೀಗೆ, ತನ್ನದೇ ಆದ ಹೊಳಪೂ, ನಯವೂ, ಅಂದವೂ ಉಳ್ಳ ಪೀತಾಂಬರಗಳಿಗೆ ಮೂಲವಸ್ತುವು, " ರೇಷ್ಮೆಯ ಎಳೆಗಳು."

ರೇಷ್ಮೆಯು ಹೂವಿನ ಗಿಡಗಳ ಮೇಲೆ ಹಾರಾಡುವ ಬಣ್ಣದ ಚಿಟ್ಟೆಯ ಹುಳುವಿನಿಂದ ಉತ್ಪತ್ತಿಯಾದದ್ದು. ರೇಷ್ಮೆಯನ್ನು ಉತ್ಪತ್ತಿಮಾಡುವ ಈ ಚಿಟ್ಟೆಗೆ 'ರೇಷ್ಮೆಯ ಚಿಟ್ಟೆಹುಳು' ವೆಂದು ಹೆಸರು. ಈ ಹುಳುವು ಹಿಪ್ಪೆನೇರಳೇಗಿಡದ ಎಲೆಗಳ ತಳಭಾಗದಲ್ಲಿ ಸಾಲುಸಾಲಾಗಿ ಮೊಟ್ಟೆಯನ್ನಿಡುತ್ತದೆ. ಇಲ್ಲವಾದಲ್ಲಿ ಪಕ್ಷಿಗಳು ಇವುಗಳನ್ನು ಎಲೆಯಸಮೇತ ಭಕ್ಷಿಸುತ್ತವೆ. ಸೂರ್ಯರಶ್ಮಿಯು ತಗಲುತ್ತಾ ಬಂದಂತೆಲ್ಲಾ ಈ ಮೊಟ್ಟೆಗಳು ಒಡೆದು, ಸೂಕ್ಷ್ಮವಾದ ಮರಿಗಳು ಹೊರಕ್ಕೆ ಬರುತ್ತವೆ. ಇವು ಹಿಪ್ಪನೇರಳೇ ಸೊಪ್ಪನ್ನೇ ತಿಂದು ಕೊಬ್ಬಿ ಬೆಳೆಯುತ್ತವೆ. ಹತ್ತು-ಹದಿನೈದು ದಿನಗಳೊಳಗಾಗಿ ಈ ಹುಳುಗಳು ನಾಲ್ಕು-ಐದು ಸಲ ಹಾವಿನಂತೆ ಪೊರೆಬಿಡುತ್ತವೆ. ನಂತರ, ಇವು ಆಹಾರಸೇವನೆಯನ್ನು ನಿಲ್ಲಿಸಿ, ಜಠರದಿಂದ ಒಂದು ವಿಧವಾದ ಅಂಟುದ್ರವವನ್ನು ಹೊರಕ್ಕೆ ಚೆಲ್ಲುತ್ತವೆ. ಈ ದ್ರವವು ಬಾಯಿಯೊಳಗಣ ಎರಡು ರಂಧ್ರಗಳ ಮೂಲಕ ಹೊರಕ್ಕೆ ಬರುತ್ತದೆ ; ಹೊರಗಿನ ಗಾಳಿ ಸೋಕಿದ ಕೂಡಲೆ ಗಟ್ಟಿಯಾಗಿ, ಕಡ್ಡಿಗಳಂತಾಗುತ್ತವೆ. ಇವೇ ರೇಷ್ಮೆಯ ಎಲೆಗಳು. ಒಳಗೆ ಅಂಟುದ್ರವವು ಹೆಚ್ಚುಹೆಚ್ಚಾಗಿ ಉತ್ಪತ್ತಿಯಾಗಿ ಒತ್ತರಿಸಿ

ಬರುವುದರಿಂದ, ರಂಧ್ರಗಳ ಮೂಲಕ ಎಳೆಗಳು ಮುಂದಕ್ಕೆ ತಳ್ಳಲ್ಪಡುತ್ತವೆ. ಹೀಗೆ ಹೊರಕ್ಕೆ ಬಂದ ಎಳೆಗಳು ಜೊತೆಯಾಗಿ ಹುಳುವಿನ ಮೈಸುತ್ತಲೂ ಬಳಸಿಬರುತ್ತದೆ ಮತ್ತು ಹುಳುವಿನ ಸುತ್ತಲೂ ರೇಷ್ಮೆಯ ಗೂಡು ಆರಂಭ ವಾಗುತ್ತದೆ. ಎಳೆಯು ವೃದ್ಧಿಯಾಗಿ ಲಂಬಿಸುತ್ತಿರುತ್ತದೆ. ನಮ್ಮ ದೇಶದ ಹುಳುವು ತಯಾರಿಸಿದ ರೇಷ್ಮೆಯ ಎಳೆಯು ಮುನ್ನೂರು ಗಜಗಳಿಂದ ಆರು ನೂರು ಗಜಗಳಷ್ಟು ಉದ್ದವಾಗಿರುತ್ತದೆ. ಚೈನಾ ದೇಶದಲ್ಲಿ ಹೀಗೆಯೇ ಉತ್ಪತ್ತಿಯಾಗುವ ಎಳೆಯು ಆರುನೂರು ಗಜಗಳಿಂದ ಸಾವಿರದಮುನ್ನೂರು ಗಜಗಳಷ್ಟು ಉದ್ದವಾಗಿರುತ್ತದೆ. ಸುಮಾರು ಮೂರು ವಾರಗಳಲ್ಲಿ ಎಳೆಯು ಬಳಸುತ್ತಾಬಂದು ಗೂಡನ್ನು ಕಟ್ಟಿ ಮುಗಿಸುತ್ತದೆ. ಬಳಸಿಬಂದ ಎಳೆಯು ∞ ಆಕಾರದಲ್ಲಿ ಸಂಚರಿಸಿ ಕೋಶವು ನಿರ್ಮಿತವಾಗುತ್ತದೆ. ಈ ವೇಳೆಗೆ, ಆಯಾಸದಿಂದ ಬಳಲಿದ ಹುಳುವು ಬಹಳ ಚಿಕ್ಕದಾಗಿರುತ್ತದೆ. ಅಲ್ಲದೆ, ವಿಶ್ರಾಂತಿ ಪಡೆಯಲು ಜಡತ್ವವನ್ನು ಹೊಂದಿ ಮಲಗುತ್ತದೆ. ಈಗ, ಹುಳುವಿಗೆ ' ಕೋಶಕ್ರಿಮಿ ' ಯೆಂದು ಹೆಸರು. ಈ ಪರಿಸ್ಥಿತಿಯಲ್ಲಿರುವಾಗ, ರೇಷ್ಮೆಯ ಕೋಶಗಳನ್ನು ಸಂಗ್ರಹಿಸಿ, ನೀರಿನ ಹಬೆಯಿಂದ ಬೇಯಿಸುತ್ತಾರೆ. ಆರಿದ ನಂತರ, ಎಳೆಯನ್ನು ಬಿಡಿಸಿ, ಹದಗೊಳಿಸುತ್ತಾರೆ. ಈ ಘಟ್ಟವನ್ನು ಅಜಾಗರೂಕತೆಯಿಂದ ದಾಟಿದಲ್ಲಿ, ಹುಳುವು ಬೆಳೆದು ತನ್ನ ರೂಪನ್ನೇ ಬದಲಾಯಿಸಿಕೊಳ್ಳುತ್ತದೆ. ರೆಕ್ಕೆ, ಕಾಲುಗಳು ಮತ್ತು ಸೊಂಡಿಲೆಂಬ ಉಪಾಂಗಗಳು ಮೊಳೆತು ಒಂದು ಪುಟ್ಟ ಚಿಟ್ಟೆಯಾಗುತ್ತದೆ. ಇದು, ಕೋಶ ವನ್ನು ಭೇದಿಸಿಕೊಂಡು ಹೊರಕ್ಕೆ ಬರುತ್ತದೆ. ಈ ಒಡೆದ ಕೋಶಗಳನ್ನೂ ಸಂಗ್ರಹಿಸಿ, ಇವುಗಳನ್ನು ವಿಜ್ಞಾನರೀತ್ಯಾ ಬೇಯಿಸಿ ರೇಷ್ಮೆಯನ್ನು ತೆಗೆಯು ತ್ತಾರೆ. ಈ ವಿಧವಾದ ಎಳೆಗಳಿಗೆ, ಕಚ್ಚಾ ರೇಷ್ಮೆ (ಸ್ಪನ್) ಎಂದು ಹೆಸರು. ಇದೂ ಸಹ ಗುಣದಲ್ಲಿ ರೇಷ್ಮೆಯನ್ನು ಸರ್ವವಿಧದಲ್ಲಿಯೂ ಹೋಲುತ್ತದೆ. ಆದರೆ ಅಂದದಲ್ಲಿ ಕಮ್ಮಿ. ಕಚ್ಚಾರೇಷ್ಮೆಯ ಕಾರ್ಖಾನೆಯು ಚನ್ನಪಟ್ಟಣದಲ್ಲಿ ಸರ್ಕಾರದ ಆಡಳಿತಕ್ಕೆ ಒಳಪಟ್ಟು ನಿರ್ಮಿತವಾಗಿದೆ.

ಬಿಡಿಸಿದ ರೇಷ್ಮೆಯ ಎಳೆಗಳ ಮೇಲೆ, ಬೆರಳುಗಳನ್ನಾಡಿಸಿದರೆ, ಒಂದು ವಿಧವಾದ ಅಂಟು ಪದಾರ್ಥವು ಮೆತ್ತಿಕೊಂಡು ಇರುವುದು ತಿಳಿಯುತ್ತದೆ. ಇದಕ್ಕೆ ' ಸಿರಾಸಿನ್ ಗೋಂದು ' ಎಂದು ಹೆಸರು. ನೇಯಲು ಹದಗೊಳಿಸಿದ

ರೇಷ್ಮೆಯಿಂದ ಈ ಗೋಂದು ಬೇರ್ಪಡುತ್ತದೆ. ರೇಷ್ಮೆಯ ಎಳೆಗಳಿಗೆ ಸ್ವಾಭಾವಿಕವಾಗಿ 'ಬಿಗಿತ್ವ' ವಿರುವುದರಿಂದ, ಇವುಗಳಿಂದ ನೇಯ್ದ ಬಟ್ಟೆಗಳು ಬಾಳಿಕೆಗೆ ಬರುತ್ತವೆ. ರೇಷ್ಮೆಯ ಬಟ್ಟೆಗಳು ನಯವಾಗಿಯೂ, ಹೊಳಪಾಗಿಯೂ ಇರುತ್ತವೆ. ಇವು ನೀರನ್ನು ಬೇಗನೆ ಹೀರಿಕೊಳ್ಳುತ್ತವೆ. ಆದರೆ, ಕೊಳೆಯಾದ ರೇಷ್ಮೆಯ ಬಟ್ಟೆಗಳನ್ನು ಒಗೆದು ಒಪ್ಪಮಾಡುವುದು ಕಷ್ಟ. ಜನಸಾಮಾನ್ಯರು ರೇಷ್ಮೆಯನ್ನು ಕೊಳ್ಳುವುದೂ ಸಾಧ್ಯವಿಲ್ಲ; ಏಕೆಂದರೆ, ಇದರ ಬೆಲೆ ಹೆಚ್ಚು. ಹೇಗೂ ಒಂದೆರಡು ರೇಷ್ಮೆಯ ಬಟ್ಟೆಗಳನ್ನಾದರೂ ಪ್ರತಿಯೊಬ್ಬರೂ ಇಟ್ಟುಕೊಳ್ಳಬಹುದು. ಚಳಿಗಾಲದಲ್ಲಿ ಇವು ಶಾಖದಾಯಕವಾಗಿರುತ್ತವೆ.

## ಪ್ರಶ್ನೆಗಳು

೧. ರೇಷ್ಮೆಯ ಗೂಡು ನಿರ್ಮಿತವಾಗುವ ವಿಧಾನವನ್ನು ವಿವರಿಸಿ.

೨. ಕಚ್ಚಾ ರೇಷ್ಮೆಯೆಂದರೇನು?

೩. ರೇಷ್ಮೆಯ ಎರಡು ಮುಖ್ಯ ಗುಣಗಳನ್ನು ತಿಳಿಸಿ.

# ನಾಗರಪಂಚಮಿ

ಪ್ರಾಚೀನ ಕಾಲದಲ್ಲಿ, ಅತುಳೈಶ್ವರ್ಯದಿಂದ ನಿಬಿಡವಾಗಿ, ಇಂದ್ರನ ಪುರವಾದ ಅಮರಾವತಿಗೆ ಸಮವೆನಿಸಿದ ಚಂಪಕ ನಗರವನ್ನು ಚಂದ್ರ ಸೌದಾಗರನೆಂಬ ವಣಿಜ ವರ್ತಕನು ಆಳುತ್ತಿದ್ದನು. ಈತನು ಧರ್ಮನಿರತನು, ದೈವಭಕ್ತನು. ಪರಶಿವನೇ ಈತನ ಆರಾಧ್ಯದೇವತೆ. ಚಂದ್ರಸೌದಾಗರನ ಮನೋವೃತ್ತಿಯಂತೆ ದೇವರಲ್ಲಿ ಶಿವನೇ ಅಗ್ರಗಣ್ಯನು. ಪರಮೇಶ್ವರನನ್ನು ತ್ರಿಕರಣಶುದ್ಧಿಯಾಗಿ ಸೇವಿಸಿ, ಆತನ ಪದಕಮಲಗಳಲ್ಲಿ ಆತ್ಮವನ್ನು ಅರ್ಪಿಸಿದ ನಂತರ ಬೇರಾವ ದೇವತೆಯನ್ನೇ ಆಗಲಿ ಆರಾಧಿಸುವುದು ಅನುಚಿತವೆಂದು ಆತನ ಅಚಲನಂಬಿಕೆ. ಆತನ ಪೂರ್ವಜನ್ಮದ ಸಂಸ್ಕಾರಫಲವೋ ಏನೋ ಎಂಬಂತೆ, ಸರ್ಪಕುಲದ ಅಧಿದೇವತೆಯಾದ ಮಾನಸದೇವಿಗೆ ಹೇಗಾದರೂ ಸೌದಾಗರನಿಂದ ಪೂಜಿಸಲ್ಪಡಬೇಕೆಂಬ ಹಠ. ಮತ್ತೊಂದು ಕಾರಣ— ಯಜ್ಞದಲ್ಲಿ ಹವಿಸ್ಸನ್ನು ಪಡೆಯುವ ಅರ್ಹತೆಯನ್ನು ಪಡೆಯಬೇಕಾದಲ್ಲಿ ಸೌದಾಗರನಿಂದ ಪೂಜಿಸಲ್ಪಟ್ಟಿದ್ದರೆ ಮಾತ್ರ ಎಂದು ಅಂದಿನ ಪ್ರತೀತಿ ಮತ್ತು ಋಷಿಗಳ ತೀರ್ಪಾಗಿತ್ತು. ಹೀಗಾಗಿ, ಮಾನಸದೇವಿಯು, ತನ್ನನ್ನು ಸೌದಾಗರನು ಆರಾಧಿಸುವಂತೆ ಒತ್ತಾಯಗೊಳಿಸಲು ಅನುವಾದಳು. ನಾಮ ಭಿನ್ನವಾದರೂ ಮೂಲರೂಪನು ಒಂದೇ ಪರಾತ್ಪರ ವಸ್ತುವೆಂಬ ಭಾವನೆಯು, ಮಹಾತತ್ವಜ್ಞನಾದರೂ, ಮಾಯೆಗೆ ಸಿಲುಕಿದ ಸೌದಾಗರನ ಮನಸ್ಸಿನಲ್ಲಿ ಮೂಡದಾಯಿತು. ಹೀಗಾಗಿ, ಅರಸನು ಅನರ್ಥಪರಂಪರೆಗಳನ್ನು ಅನುಭವಿಸುವಂತಾಯಿತು.

ಸೌದಾಗಾರನು ಶಿವಪೂಜಾದುರಂಧರನಾಗಿದ್ದ ಅನೇಕ ವೇಳೆಗಳಲ್ಲಿ, ಮಾನಸದೇವಿಯು ವೈದೋರಿ ತನ್ನನ್ನೂ ಆರಾಧಿಸಿ ಅಮಿತ ಫಲಗಳನ್ನು ಪಡೆಯುವಂತೆ ಉಪದೇಶಿಸಿದಳು. ಅದು ಸಾಧ್ಯವಿಲ್ಲವೆಂಬ ಒಂದೇ ದೃಢ ಸಂಕಲ್ಪವನ್ನು ಅರಸನು ಮುಕ್ತಕಂಠನಾಗಿ ಹೇಳಿದನು. ಕುಪಿತಳಾದ ಮಾನಸದೇವಿಯು ಬಲಪ್ರಯೋಗದಿಂದ ತನ್ನನ್ನು ಪೂಜಿಸುವಂತೆ ಪ್ರೇರೇಪಿಸ ಲುದ್ಯುಕ್ತಳಾದಳು. ಚಂದ್ರಸೌದಾಗರನ ಪತ್ನಿಯ ಹೆಸರು ರತ್ನಾಂಬೆ.

ಈಕೆಯು ರೂಪ ಗುಣಸಂಪನ್ನೆಯಾಗಿ ಪತಿಯ ಹಿತೈಷಿಣಿಯಾಗಿದ್ದಳು. ಈ ದಂಪತಿಗಳಿಗೆ ದೃಢಾಂಗರೂ ಸುರೂಪಿಗಳೂ ಆದ ಆರುಮಂದಿ ಪುತ್ರರು ಜನಿಸಿದ್ದರು. ಪ್ರಾಯಸಮರ್ಥರಾದೊಡನೆ ಇವರೆಲ್ಲರಿಗೂ ವಿವಾಹವಾಗಿದ್ದಿತು. ಮಾನಸದೇವಿಯ ದ್ವೇಷದ ಕಿಡಿಯು ತರುಣ ದಂಪತಿಗಳೆಡೆಗೆ ಹಾರಿತು. ಆಕೆಯ ಮಾಯೆಯಿಂದ ಆರು ಜನ ಸುಕುಮಾರರೂ ಮಡಿದರು. ಆರು ಜನ ಸೊಸೆಯರ ಕಣ್ಣೀರಿನ ಪ್ರವಾಹವು ಅರಮನೆಯಲ್ಲಿ ಹರಿಯಿತು. ವಿಧವೆಯರ ಆಕ್ರಂದನ ಧ್ವನಿಯು ಅರಸದಂಪತಿಗಳ ಮನಗಳನ್ನು ನೆಟ್ಟ ಬಾಣಗಳಂತೆ ನೋಯಿಸಿದವು. ಈ ದುಃಖವು ಮಾನಸದೇವಿಯನ್ನು ಪೂಜಿಸದ ಪರಿಣಾಮವೆಂದು ಸೌದಾಗಾರನಿಗೆ ತಿಳಿದಿದ್ದರೂ, ಆಕೆಯನ್ನು ಪೂಜಿಸಲು ಆತನ ಮನಸ್ಸು ಒಡಂಬಡಲಿಲ್ಲ. ರತ್ನಾಂಬೆಯು ಪುತ್ರಶೋಕ ದಿಂದ ದಗ್ಧಳಾಗುತ್ತಿದ್ದಳಾದರೂ, ಪತಿಯನ್ನು ಆತನ ಇಚ್ಛೆಗೆ ವಿರುದ್ಧವಾಗಿ ಮಾನಸದೇವಿಯ ಆರಾಧನೆಗೆ ಪ್ರೇರೇಪಿಸಲು ಮುಂದುವರೆಯಲಿಲ್ಲ.

ದುಃಖದ ವೇಗವು ಹೆಚ್ಚಿದಂತೆ, ಅರಸನು ಪರಮೇಶ್ವರನನ್ನು ಮತ್ತೂ ದೃಢವಾಗಿ ನಂಬಿದನು. ರಾಜ್ಯಪಾಲನೆ ಮತ್ತು ಅದಕ್ಕೆ ಆಧಾರವಾದ ವಾಣಿಜ್ಯ ವ್ಯವಹಾರ ಸಾಧನೆ, ಮುಂತಾದ ಕರ್ತವ್ಯಗಳಿಂದ ವಿಮುಖನಾಗಿ ನಿದ್ರಾಹಾರಗಳಲ್ಲಿ ಅನಾಸಕ್ತಿ ಹೊಂದಿ ಶಿವಪೂಜೆಗೈಯ್ಯುತ್ತಿದ್ದನು. ಈ ಪರಿಣಾಮವಾಗಿ ಅರಸನಿಗೆ ವ್ಯಾಪಾರದಲ್ಲಿಯೂ ಅಪಾರ ನಷ್ಟವುಂಟಾಗಿ ದ್ರವ್ಯನಾಶವಾಯಿತು. ಆದರೆ, ಶಿವನು ಭಕ್ತನ ಪೂಜೆಯಿಂದ ಸಂತೃಪ್ತನಾಗಿ ಸ್ವಪ್ನದಲ್ಲಿ ಕಾಣಿಸಿಕೊಂಡು ಅರಸನಿಗೆ ಮತ್ತೊಬ್ಬ ಪುತ್ರನು ಜನಿಸುವನೆಂದು ಹೇಳಿ ಅಂತರ್ಧಾನನಾದನು. ಅಂತೆಯೇ ರತ್ನಾಂಬೆಯು ಗರ್ಭವತಿಯಾಗಿ, ಗಂಡು ಮಗುವಿಗೆ ಜನ್ಮವಿತ್ತಳು. ಮಗುವಿಗೆ ಲಕ್ಷ್ಮೀಂದ್ರನೆಂದು ಹೆಸರಿಡ ಲಾಯಿತು. ವಿಧಿವಿಲಾಸ! ಪುತ್ರನ ಜಾತಕಫಲದಲ್ಲಿ, ಅವನ ವಿವಾಹದ ರಾತ್ರಿ, ಸರ್ಪದಂಶನದಿಂದ ಮಡಿಯುವನೆಂದು ವಿಧಿತವಾಗಿದ್ದಿತು.

ಪ್ರಾಯಸಮರ್ಥನಾದ ಲಕ್ಷ್ಮೀಂದ್ರನಿಗೆ, ಸಾವಿತ್ರಿಗೆ ಸಮಳೆನಿಸಿದ ಬೇಹುಲಾ ಎಂಬ ಕನ್ಯಾಮಣಿಯೊಡನೆ ವಿವಾಹವಾಯಿತು. ಬೇಹುಲಾ ದೇವಿಯು ಬಾಲ್ಯದಿಂದಲೂ ಪಾರ್ವತಿಪರಮೇಶ್ವರರನ್ನು ಆರಾಧಿಸಿ ತಾನು

ಸರ್ವಮಂಗಳೆಯಾಗುವಳೆಂಬ ವರ ಪಡೆದಿದ್ದಳು. ತನಗೆ ತಕ್ಕ ಸೊಸೆ ದೊರೆತಳೆಂದು ಅರಸನು ಸಂತೃಪ್ತನಾದನು. ವಧೂವರರಿಗೆಂದು ಮುಂಚೆಯೇ ಉಕ್ಕಿನ ಅರಮನೆಯನ್ನು ಪ್ರತ್ಯೇಕವಾಗಿ ನಿರ್ಮಿಸಲಾಗಿತ್ತು; ಅಲ್ಲದೆ ಈ ಅರಮನೆಯ ಯಾವ ಭಾಗದಲ್ಲಿಯೂ ಸರ್ಪವು ಪ್ರವೇಶಿಸಲು ಸ್ಥಳವಿಲ್ಲದಂತೆ ಎಚ್ಚರಿಕೆಯನ್ನು ತಳೆಯಲಾಗಿದ್ದಿತು. ಆದರೆ, ಪ್ರತ್ಯುತ್ಪನ್ನಮತಿಯಾದ ಮಾನಸದೇವಿಯು, ಮನೆ ಕಟ್ಟುವಾಗಲೇ ಗೃಹಶಿಲ್ಪಿಗೆ ನಾನಾ ಭಯಂಕರ ರೂಪಗಳಲ್ಲಿ ಕಾಣಿಸಿಕೊಂಡು ಆತನನ್ನು ಭಯವಿಹ್ವಲನನ್ನಾಗಿ ಮಾಡಿ, ಅರಮನೆಯ ಗೋಡೆಯೊಳಗೆ ಸ್ವಲ್ಪಮಟ್ಟಿನ ಸ್ಥಳವನ್ನು ಕಲ್ಪಿಸಬೇಕೆಂದು ವಿಧಿಸಿದಳು. ಶಿಲ್ಪಿಯು ಹೆದರಿ, ಒಂದು ಗೋಡೆಯಲ್ಲಿ ಹಾವಿನ ಶರೀರವು ನುಗ್ಗುವಷ್ಟು ರಂಧ್ರವನ್ನುಳಿಸಿ ಅದನ್ನು ಇದ್ದಿಲುಪುಡಿಯಿಂದ ಮುಚ್ಚಿದನು.

ವಿವಾಹದಿನದ ರಾತ್ರಿ, ಉಕ್ಕಿನ ಅರಮನೆಯ ಸುತ್ತಲೂ ಖಡ್ಗಧಾರಿಗಳಾದ ಸೇವಕರು ಎಚ್ಚರವಾಗಿದ್ದು ಪಹರೆಕೊಡುವಂತೆ ವಿಧಿಸಲಾಗಿತ್ತು. ವಧೂವರರನ್ನು ಅರಮನೆಯೊಳಕ್ಕೆ ಬಿಟ್ಟು ಬಾಗಿಲನ್ನು ಅರಸನೇ ಸ್ವಹಸ್ತದಿಂದ ಬಂಧಿಸಿಬಂದನು. ಆದರೂ, ಆ ರಾತ್ರಿ ಪ್ರತಿಯೊಬ್ಬರೂ ತಲ್ಲಣಿಸುತ್ತ ಎಚ್ಚರದಿಂದಲೇ ಇದ್ದರು. ಹಾಯ್! ನಟ್ಟನಡುರಾತ್ರಿಯಲ್ಲಿ ಮಾನಸಳಿಂದ ನಿರ್ಮಿತವಾದ ಸರ್ಪವು ಇದ್ದಿಲುಪುಡಿಯನ್ನು ಕೊರೆದು, ರಂಧ್ರದ ಮೂಲಕ ಒಳಕ್ಕೆ ಹೊಕ್ಕಿತು. ನಿದ್ರಾಪರವಶನಾದ ಲಕ್ಷ್ಮೀಂದ್ರನನ್ನು ಕಡಿಯಿತು. ಸರ್ಪದಂಶನದಿಂದ ಲಕ್ಷ್ಮೀಂದ್ರನು ಮಡಿದನು. ಈ ಆಕಸ್ಮಿಕ ಘಟನೆಯನ್ನು ಕಂಡ ಬೇಹುಲಳು ಭಯಭ್ರಾಂತಳಾಗಿ ಚೀರಿದಳು. ಕಾವಲುಗಾರರು ಒಡನೆಯೇ ರಾಜನಿಗೆ ವರ್ತಮಾನವನ್ನು ಅರುಹಿದರು. ಅರಸನು ಮತ್ತು ಪರಿವಾರದವರು ಕೂಡಲೇ ಆ ಸ್ಥಳಕ್ಕೆ ಧಾವಿಸಿ ಲಕ್ಷ್ಮೀಂದ್ರನು ಮಡಿದ ಸಂಗತಿಯನ್ನು ಅರಿತರು. ಇಡೀ ಅರಮನೆಯು ದುಃಖಸಾಗರದಲ್ಲಿ ಮುಳುಗಿತು. ಪತಿಸನ್ನಿಧಿಯನ್ನು ಸೇರಿದ ಕೆಲವು ಘಂಟೆಗಳಲ್ಲಿಯೇ ವಿಧವೆಯಾದಳು ಬೇಹುಲ! ತನ್ನ ಸೌಭಾಗ್ಯವು ಹೀಗೆ ಅಳಿಸಿಹೋದದ್ದಕ್ಕಾಗಿ ಅವಳು ರೋಧಿಸುತ್ತಿದ್ದಳು.

ಕ್ರಮೇಣ ಲಕ್ಷ್ಮೀಂದ್ರನ ಶವಸಂಸ್ಕಾರಕ್ಕೆ ಏರ್ಪಾಟುಗಳು ನಡೆದವು. ಲಕ್ಷ್ಮೀಂದ್ರನ ಶರೀರವನ್ನು ದಹನಕ್ಕಾಗಿ ಸ್ಮಶಾನಕ್ಕೆ ಒಯ್ಯಬೇಕಾಗಿದ್ದಿತು.

ಆದರೆ, ಬೇಹುಲಳು ಇದನ್ನು ಅಂಗಲಾಚಿ ತಡೆದಳು. ಏಕೆಂದರೆ, ಎಂದಾದರೊಂದುದಿನ ವಿಷದ ನಂಜು ಇಳಿದು ತನ್ನ ಪತಿಯ ಶರೀರದಲ್ಲಿ ಜೀವಸಂಚಾರವಾಗಬಹುದೆಂದು ಬೇಹುಲಳು ದೃಢವಾಗಿ ನಂಬಿದ್ದಳು. ಅನೇಕ ಪ್ರಾಜ್ಞರು ಅವಳ ಯೋಚನೆಯನ್ನು ಅನುಮೋದಿಸುತ್ತಾ, ಬಾಳೆಯ ಗಿಡಗಳಿಂದ 'ಭೇಲಾ' ಎಂಬ ತೆಪ್ಪವನ್ನು ಕಟ್ಟಿ ಲಕ್ಷ್ಮೀಂದ್ರನ ಮೃತ ಶರೀರವನ್ನು ಅದರ ಮೇಲಿಟ್ಟರು. (ಆಗಿನ ಕಾಲದಲ್ಲಿ ಹಾವು ಕಡಿತದಿಂದ ಸತ್ತವರ ಶರೀರಕ್ಕೆ ಯಾರಾದರೂ ಚಿಕಿತ್ಸೆಮಾಡಿ ನಂಜು ಇಳಿಸುವರೆಂಬ ಧೈರ್ಯವಿದ್ದಿತು.) ಮತ್ತು ತೆಪ್ಪವನ್ನು ನದಿಯಮೇಲೆ ತೇಲಿಸಿಬಿಟ್ಟರು. ಒಡನೆಯೇ ಬೇಹುಲಳು ತೆಪ್ಪವನ್ನೇರಿ ಪತಿಯ ಶಿರಸ್ಸನ್ನು ತನ್ನ ತೊಡೆಯಮೇಲಿಟ್ಟು ಕುಳಿತುಕೊಂಡಳು. ಅವಳಿಗೆ ಬುದ್ಧಿಭ್ರಮಣೆಯುಂಟಾಗಿರಬೇಕೆಂದೇ ಭಾವಿಸಿ ಪರಿಜನರೆಲ್ಲಾ ಆಕೆಯನ್ನು ತಡೆಯಲೆತ್ನಿಸಿ ಭಗ್ನರಾದರು. ತನ್ನ ಪತಿಯು ಮರಳಿ ಬದುಕಿದಹೊರತು ತಾನು ಶವವನ್ನು ಬಿಟ್ಟುಕೊಡಲಾರಳೆಂದು ಶಪಥ ಮಾಡಿದಳು. ತೆಪ್ಪವು ಮೆಲ್ಲಮೆಲ್ಲನೆ ಸರಿಯಿತು. ಹಗಲಿರುಳೆನ್ನದೆ, ಚಳಿ ಮಳೆ ಬಿಸಿಲು ಎನ್ನದೆ ಬೇಹುಲಳು ತನ್ನ ಪತಿಯ ಶರೀರವನ್ನು ಅಪ್ಪಿ ಕುಳಿತಿದ್ದಳು. ದೈವಪ್ರೇರಣೆಯೋ ಎಂಬಂತೆ, ಹಸಿವು, ಬಾಯಾರಿಕೆ ಮತ್ತು ನಿದ್ರೆ ಇವಳನ್ನು ಬಾಧಿಸಲಿಲ್ಲ. ಕಾಲಕ್ರಮೇಣ, ಶವವು ಕ್ಷಯಿಸಲಾರಂಭವಾಗಿ, ಕೇವಲ ಅಸ್ಥಿಪಂಜರ ಮಾತ್ರ ಉಳಿಯಿತು. ನೊಂದು, ಬಳಲಿ ಕೃಶಳಾಗಿ ಕಂಠಗತ ಪ್ರಾಣವುಳ್ಳವಳಾಗಿ ಬೇಹುಲಳು ಪರಮೇಶ್ವರನನ್ನು ನಿರಂತರವಾಗಿ ಸ್ತೋತ್ರಮಾಡುತ್ತಿದ್ದಳು.

ಹೀಗಿರಲು ಒಂದು ದಿನ, ಬೇಹುಲಳ ಮುಂದೆ ಮಿಂಚಿನಂತೆ ಮಾನಸ ದೇವಿಯು ಪ್ರತ್ಯಕ್ಷಳಾದಳು. ಆರ್ತತ್ರಾಣೆಯಾದ ಬೇಹುಲಳು ಮಾನಸ ದೇವಿಯನ್ನು ಕಂಡು, ತನ್ನ ಮೊರೆಯನ್ನು ಕೇಳಿ ಮೈದೋರಿದ ಪಾರ್ವತಿ ದೇವಿಯೆಂದು ಭ್ರಮಿಸಿ, ಆಕೆಯ ಸ್ತುತಿಗೈದು ತನ್ನ ಪತಿಯ ಪ್ರಾಣವನ್ನು ಮರಳಿ ದಯಪಾಲಿಸಬೇಕೆಂದು ಅಂಗಲಾಚಿ ಬೇಡಿಕೊಂಡಳು. ಮಾನಸ ದೇವಿಯು ಆಕೆಯ ಧ್ಯಾನಭಂಗಮಾಡಿ ತಾನಾರೆಂಬುದನ್ನು ಬೇಹುಲಳಿಗೆ ತಿಳಿಸಿ, ತಾನು ಸೌದಾಗರನಿಂದ ಪೂಜಿಸಲ್ಪಟ್ಟಲ್ಲಿ ಆತನ ಮಡಿದ ಪುತ್ರರನ್ನೆಲ್ಲಾ ಸಜೀವವಂತರನ್ನಾಗಿ ಮಾಡುವುದಾಗಿ ಭರವಸೆ ನೀಡಿದಳು. ಜ್ಞಾನಮಯಿ

ಯಾದ ಬೇಹುಲಳಿಗೆ ಪರಮೇಶ್ವರನಿಗೂ ಮಾನಸಳಿಗೂ ಇರುವ ಭೇದವೇನೂ ತೋರಲಿಲ್ಲ. ಸರ್ವರ ಆತ್ಮದಲ್ಲಿಯೂ ಪರಮೇಶ್ವರನೇ ನೆಲೆಸಿರುವಾಗ, ಮಾನಸದೇವಿಯನ್ನು ಪೂಜಿಸಿದಲ್ಲಿ ಕುಂದೇನು ಎಂದು ಯೋಚಿಸಿ, ತಾನು ಆಕೆಯನ್ನು ಪೂಜಿಸಲು ಇಷ್ಟವುಳ್ಳವಳಾಗಿರುವಳೆಂದು ಬಿನ್ನಯಿಸಿಕೊಂಡಳು. ಸಂತುಷ್ಟಳಾದ ಮಾನಸದೇವಿಯು ಆಕೆಗೆ ತನ್ನ 'ಮಾನಸಕಳಶ' ವನ್ನು ದಯಪಾಲಿಸಿ, ಪೂಜಿಸುವಂತೆ ಹೇಳಿ ಅಂತರ್ಧಾನಳಾದಳು. ಬಳಿಕ, ಬೇಹುಲಳು ಕಳಶವನ್ನು ಭೇಲದಮೇಲೆ ಸ್ಥಾಪಿಸಿ, ಅಲ್ಲಲ್ಲಿ ದೊರೆತ ಕನ್ನೈದಿಲೆ ಪುಷ್ಪಗಳಿಂದ ಪೂಜಿಸಿ, ಸ್ತುತಿಸಿದಳು. ತತ್ಪರಿಣಾಮವಾಗಿ, ಲಕ್ಷ್ಮೀಂದ್ರನ ನಶಿಸಿಹೋದ ಶರೀರವು ಮತ್ತೆ ತುಂಬಿಕೊಂಡಿತು. ಉಸಿರು ತುಂಬದಿದ್ದರೂ ಸಹ ಮೃತದೇಹವು ಕಾಂತಿಯುತವಾಗಿದ್ದಿತು. ಬೇಹುಲಳ ಪತಿಭಕ್ತಿ ಪರಾಯಣತೆ, ಚಿತ್ತಸ್ಥೈರ್ಯ, ಪವಿತ್ರತೆ ಈ ಗುಣಗಳು ಪಾರ್ವತಿದೇವಿಯ ಮನಸ್ಸನ್ನು ಕರಗಿಸಿತು. ಲಕ್ಷ್ಮೀಂದ್ರನನ್ನು ಬದುಕಿಸುವಂತೆ ಪರಮೇಶ್ವರ ನನ್ನು ಒತ್ತಾಯಗೊಳಿಸಿದಳು. ಪರಶಿವನು ಮಾನಸದೇವಿಯನ್ನು ಬರಮಾಡಿ ಕೊಂಡು ಲಕ್ಷ್ಮೀಂದ್ರನಿಗೆ ಜೀವದಾನ ಮಾಡುವಂತೆ ಹೇಳಿದನು. ಆದರೆ ಆಕೆಯು ಒಪ್ಪಲಿಲ್ಲ; ಬೇಹುಲಳಿಗಿತ್ತ ತನ್ನ ಆತ್ಮಕಳಶವನ್ನು ಚಂದ್ರ ಸೌದಾಗಾರನು ಪೂಜಿಸಿದ ಹೊರತು ಲಕ್ಷ್ಮೀಂದ್ರನಿಗೆ ಜೀವತಳೆಯುವುದು ದುರ್ಲಭವೆಂದು ಸ್ಪಷ್ಟಪಡಿಸಿದಳು.

ಪರಮೇಶ್ವರನ ದಯೆಯಿಂದ ತೆಪ್ಪವು ಚಂಪಕ ನಗರದ ಕಡೆಗೆ ಮತ್ತೆ ಹೊರಟಿತು. ನದಿಯ ತೀರದಲ್ಲಿ ತೆಪ್ಪವು ಬಂದ ವಿಷಯವನ್ನು ಭಟರು ಅರಸನಿಗೆ ತಿಳುಹಿದರು. ಸಮಸ್ತ ಜನರೂ, ರಾಜಮನೆತನದವರೂ ಧಾವಿಸಿ ಬಂದು ಹರ್ಷೋದಾಶ್ಚರ್ಯಗಳಿಂದ ನೋಡುತ್ತಾರೆ! ನಿದ್ದೆ ಮಾಡುವವನಂತೆ ಮಲಗಿದ್ದಾನೆ, ಲಕ್ಷ್ಮೀಂದ್ರ ಮತ್ತು ಬೇಹುಲಳು ಧ್ಯಾನ ಸಮಾಧಿಯಲ್ಲಿದ್ದಾಳೆ! ಚಂದ್ರಸೌದಾಗರನು ತೆಪ್ಪದ ಅತಿ ಸಮೀಪದಲ್ಲಿ ನಿಂತು ನೆಟ್ಟಗಣ್ಣಿನಿಂದ ನೋಡುತ್ತಿದ್ದನು. ಮತ್ತೂ ಆಶ್ಚರ್ಯ! ಕಳಶದ ಹಿಂಬದಿಯಲ್ಲಿ ಸಾಕ್ಷಾತ್ ಪರಮೇಶ್ವರನೇ ಪ್ರತ್ಯಕ್ಷನಾಗಿದ್ದಾನೆ! ಚಂದ್ರಸೌದಾಗರನು ಭಕ್ತಿ ಮತ್ತು ಆಶ್ಚರ್ಯದಿಂದ ಮೈಮರೆತು ಕಣ್ಮುಚ್ಚಿ ಸ್ಮರಣೆಮಾಡುತ್ತಾ, "ಪರಮೇಶ್ವರಾ! ದೀನಬಂಧೂ! ನಿನ್ನ ಚರಣದಾಸನಾದ ನನಗೇಕೆ ಈ ಪುತ್ರಶೋಕವನ್ನಿಟ್ಟೆ

ಪ್ರಭೂ, ನನ್ನ ಪುತ್ರವಧುಗಳ ಆಕ್ರಂದನವು ನನ್ನ ಹೃದಯವನ್ನು ಸೀಳು ತ್ತಿದೆಯಲ್ಲ ಪ್ರಭೂ! ಏಕೆ ಇಂತು ನಿರ್ದಯನಾದೆ ಸ್ವಾಮಿ," ಎಂದು ಪ್ರಲಾಪಿಸುತ್ತಾ ಕಣ್ಣುಬಿಟ್ಟನು. ಪರಶಿವನು, "ಏಳೇಳು ಭಕ್ತಾ, ನಿನಗೆ ಶುಭವಾಗಲಿ, ನಿನ್ನ ಕುಲವಧು ಬೇಹುಲಳ ಪುಣ್ಯ ಪ್ರಭಾವದಿಂದ ದೊರೆತ ಈ ಆತ್ಮಕಳಶವನ್ನು ಪೂಜಿಸಿ, ಅಳಿದ ಪುತ್ರರನ್ನು ಮರಳಿ ಪಡೆದು ಸುಖಿ ಯಾಗು," ಎಂದು ಹರಸಿ ಆತ್ಮಕಳಶವನ್ನು ಅರಸನ ಕೈಗಿತ್ತನು. ಅರಸನು ಅಂಜಲಿಬದ್ಧನಾಗಿ ಕಳಶವನ್ನು ಪಡೆದು ಕಣ್ಣೆತ್ತಿ ನೋಡುತ್ತಾನೆ! ಪರಮೇಶ್ವರ ನಿಗೆ ಬದಲು ಮಾನಸದೇವಿ ನಿಂತಿದ್ದಾಳೆ. ಇದೆಲ್ಲವೂ ಮಾನಸಳ ಮಾಯೆ ಯೆಂದು ತಿರಸ್ಕಾರದಿಂದ ಆ ಕಳಶವನ್ನು ಕೆಳಗಿಡಬೇಕೆಂದಿರುವಲ್ಲಿ ಪುನಃ ಪರಮೇಶ್ವರನ ಸಾಕ್ಷಾತ್ಕಾರ! ಆಗ ಅರಸನ ಮನಸ್ಸಿನಲ್ಲಿ ಕವಿದಿದ್ದ ಅಂಧಕಾರವು ಹರಿದು ಜ್ಞಾನಜ್ಯೋತಿಯು ಬೆಳಗಿತು. ತನ್ನ ಸರ್ವಾಪರಾಧವನ್ನು ತಿಳಿದ ಅರಸನು, ದೈವದ್ರೋಹಿಯಾದುದಕ್ಕೆ ಪರಿತಪಿಸಿ, ಈಶ್ವರನ ಮೊರೆಹೊಕ್ಕು ತನ್ನನ್ನು ಕ್ಷಮಿಸುವಂತೆ ಬೇಡಿಕೊಂಡನು. ಕರುಣಾಳುವಾದ ಶಂಕರನು, ಭಕ್ತನನ್ನು ಹರಸಿ, ಕಳಶವನ್ನು ಪೂಜಿಸಿ ಮಾನಸಳ ಕೃಪೆಗೆ ಪಾತ್ರನಾಗಿ ಆಶೀರ್ವಾದ ಪಡೆಯುವಂತೆ ಹೇಳಿ ಅಂತರ್ಧಾನನಾದನು.

ಸೌದಾಗರನ ಛಲವು ಹರಿಯಿತು. ಈಶ್ವರದತ್ತವಾದ ಮಾನಸದೇವಿಯ ಆತ್ಮಕಳಶವನ್ನು ಷೋಡಶೋಪಚಾರಗಳಿಂದ ಪೂಜಿಸಿ ಧ್ಯಾನಮಗ್ನನಾದನು. ಪರಮಾಶ್ಚರ್ಯವೆನಿಸುವಂತೆ, ಅರಮನೆಯಲ್ಲಿ ಕೋಲಾಹಲಧ್ವನಿ. ಧ್ಯಾನ ಭಗ್ನವಾಗಿ ಅರಸನು ಕಣ್ದೆರೆದು ನೋಡುತ್ತಾನೆ! ಬೇಹುಲಳು ತನ್ನ ಪತಿಯ ಕರವಿಡಿದು ಭೇಲದಿಂದ ಇಳಿದು ಬರುತ್ತಿದ್ದಾಳೆ! ಮತ್ತು ಅಳಿದಿದ್ದ ಆರು ಮಂದಿ ಪುತ್ರರೂ ಜೀವತಳೆದು ಬಂದವರಾಗಿ ತಂತಮ್ಮ ಪತ್ನಿಯರಿಗೆ ಆನಂದ ವನ್ನುಂಟು ಮಾಡುತ್ತಿದ್ದಾರೆ. ತನ್ನ ಏಳು ಮಂದಿ ಪುತ್ರರೂ, ಸೊಸೆಯರೂ ಸೌದಾಗರನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದರು. ಆ ವಿಚಾರ ಮಾಡಲಾಗಿ, ಆ ಮಹಾ ಸುದಿನವು ಶ್ರಾವಣ ಶುದ್ಧ ಪಂಚಮಿಯೆಂದು ಪುರೋಹಿತರಿಂದ ತಿಳಿಯಿತು. ಆ ದಿನ ಮೊದಲಾಗಿ, ನಾಗರಪಂಚಮಿಯು

ವ್ರತವನ್ನು ಪುರಜನರೆಲ್ಲರೂ ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಆಚರಿಸತಕ್ಕದ್ದೆಂದು ಅರಸನು ಪ್ರಕಟಿಸಿದನು.

## ಪ್ರಶ್ನೆಗಳು

೧. ಚಂದ್ರಸೌದಾಗರನ ಅನರ್ಥ ಪರಂಪರೆಗಳಿಗೆ ಕಾರಣವೇನು ?

೨. ಬೇಹುಲಳಿಗೆ ಬುದ್ಧಿಭ್ರಮಣೆಯುಂಟಾಗಿದ್ದಿತೆಂದು ಪುರಜನರು ಭಾವಿಸಿದರು, ಏಕೆ ?

೩. " ಬೇಹುಲಳ ಅಮರಪ್ರೇಮವು ಗೆದ್ದಿತು," ಹೇಗೆ ? ವಿವರಿಸಿ.

೪. " ಅರಸನ ಅಜ್ಞಾನವು ಹರಿಯಿತು," ಇದನ್ನು ಸ್ಪಷ್ಟಪಡಿಸಿ.

# ಭೇತಾಳ ಬೊಂಬು

ಸೃಷ್ಟಿಯ ವಿಚಿತ್ರ ವಿಶೇಷಗಳಲ್ಲಿ, ಇಪ್ಪತ್ತು ಅಡಿಗಳಿಂದ ನೂರಇಪ್ಪತ್ತು ಅಡಿಗಳಿಗೂ ಮೀರಿದ ಎತ್ತರದಷ್ಟು ಬೆಳೆಯುವ ಒಂದು ಜಾತಿಯ ಹುಲ್ಲಿದೆ. ಇದಕ್ಕೆ 'ಬಿದಿರು' ಎಂದು ಹೆಸರು. ನಮ್ಮ ಹಿರಿಯರು ಹೇಳುವ ಅನೇಕ ಕಟ್ಟುಕಥೆಗಳಲ್ಲಿ, ನಮಗೆ ಈ ಪ್ರಪಂಚದಲ್ಲಿ ಬೇಕಿದ್ದನ್ನು ಒದಗಿಸುವ ಒಂದು ಮಾಯಾವ್ಯಕ್ತಿ ಇದೆಯೆಂದೂ ಅದಕ್ಕೆ ಭೇತಾಳವೆಂದು ಹೇಳುತ್ತಾರೆ. ಹಾಗೆಯೇ, ಮಾನವನಿಗೆ ಮಿಶ್ರೋದ್ದೇಶಗಳಿಗೆ ಉಪಯುಕ್ತವಾಗುವಂತಹ ವಸ್ತುವೆಂದರೆ ಈ ಭೇತಾಳ–ಬಿದಿರು. ಇದಕ್ಕೆ ನಮ್ಮ ಊರಿನಲ್ಲಿ ಬೊಂಬು ಎಂದೂ ಹೇಳುವ ವಾಡಿಕೆ ಇದೆ. ಇದು ಚೈನಾ, ಜಪಾನ್, ಮಲಯಾ, ಸಿಲೋನ್, ಜಾವಾ ಮತ್ತು ನಮ್ಮ ಭಾರತದಲ್ಲಿ ಹೇರಳವಾಗಿ ಬೆಳೆಯುತ್ತದೆ. ನಮ್ಮ ಮೈಸೂರು ದೇಶದ ಅನೇಕ ಊರುಗಳಲ್ಲಿ ಬಿದಿರು ಸೊಂಪಾಗಿ ಬೆಳೆಯುತ್ತದೆ.

ಬಿದಿರು, ಸಾಮಾನ್ಯವಾಗಿ ಒತ್ತೊತ್ತಾಗಿ ಬೆಳೆಯುತ್ತದೆ. ಹೀಗೆ ಬೆಳೆದ ಗುಂಪಿಗೆ ಬಿದಿರಿನ 'ಮೆಳೆ' ಎಂದು ಹೆಸರು. ಇತರ ಗಿಡಗಳಿಗಿರುವಂತೆಯೇ, ಬಿದಿರು ಗಿಡಕ್ಕೂ ಬೇರು, ಕಾಂಡ ಅಥವಾ ದಿಂಡು ಮತ್ತು ಕೊಂಬೆಗಳೆಂಬ ಭಾಗಗಳಿವೆ. ಬೇರು ಭೂತಲದಲ್ಲಿದ್ದು ಕವಲೊಡೆದಿರುತ್ತದೆ. ಒಂದೊಂದು ಕವಲಿನಿಂದಲೂ ಒಂದೊಂದು ಕಾಂಡವು ಮೇಲಕ್ಕೆ ಹೊರಡುತ್ತದೆ; ಅಂದರೆ ಸುಮಾರು ಇಪ್ಪತ್ತಕ್ಕಿಂತ ಹೆಚ್ಚಾಗಿ ಕಾಂಡಗಳೇಳುತ್ತವೆ. ಸಾಮಾನ್ಯವಾದ ಗರಿಕೆ, ಹುಲ್ಲು ಇವುಗಳ ಗೊಂಚಲಿನಂತೆ ಬೆಳೆಯುವ ರೀತಿಯಲ್ಲಿಯೇ ಬಿದಿರಿನ ಮೆಳೆಯೂ ಗೊಂಚಲಾಗಿ ಬೆಳೆಯುತ್ತದೆ.

ನೀಳವಾಗಿ, ಕುಡಿಯೊಡೆಯದೆ ಬೆಳೆಯುವ ದಿಂಡಿಗೆ 'ಗಳು' ಅಥವಾ 'ಬೊಂಬು' ಎಂದು ಹೆಸರು. ಕಾಂಡದ ಅಗ್ರದಲ್ಲಿ, ಕೊಂಬೆಗಳು ನೆಟ್ಟಗೆ ಹೊರಟು, ಹರಡುತ್ತವೆ. ಕಾಂಡದ ಉದ್ದಕ್ಕೂ ಅಲ್ಲಲ್ಲಿ ಕಬ್ಬಿನಲ್ಲಿರುವಂತೆ

ಗಿಣ್ಣುಗಳಿರುತ್ತವೆ. ಒಂದೊಂದು ಗಿಣ್ಣಿನಲ್ಲಿಯೂ ಡೊಗರಾದ ಪ್ರದೇಶವಿದೆ. ಆದ್ದರಿಂದ, ನೋಡುವವರಿಗೆ ಬಿದಿರು ಟೊಳ್ಳಾದ ಅನೇಕ ಕೊಳವೆಗಳನ್ನು ಜೋಡಿಸಿದಂತೆ ಕಾಣುತ್ತದೆ. ಗಳುವಿನ ಹೊರ ಹೊದ್ದಿಕೆಯು ಹೊಳಪುಳ್ಳದ್ದಾಗಿಯೂ, ಗಡುಸಾಗಿಯೂ ಇರುತ್ತದೆ. ಇದರಿಂದಲೇ, ಬಿದಿರಿಗೆ ಉನ್ನತವಾದ ಶಕ್ತಿಯೂ, ದೃಢತ್ವವೂ ಇವೆ.

ಪ್ರಪಂಚದ ನಾನಾ ದೇಶಗಳಲ್ಲಿ, ಜನಜೀವನಕ್ಕೆ ಬಿದಿರಿನಷ್ಟು ಉಪಯುಕ್ತವಾಗಿರುವ ಗಿಡವು ಮತ್ತೊಂದಿಲ್ಲವೆಂದು ಹೇಳಬಹುದು. ಮನೆ ಕಟ್ಟುವುದಕ್ಕೂ, ರೈತನ ಉಳುಮೆಗೂ ಬೇಕಾಗುವ ಉಪಕರಣಗಳನ್ನು ತಯಾರಿಸುವುದಕ್ಕೂ, ಬಂಡಿಗಳನ್ನು ಕಟ್ಟುವುದಕ್ಕೂ ಬಿದಿರು ಎಷ್ಟು ಉಪಯೋಗವಾಗುತ್ತದೆ ಎಂಬುದು ನಮಗೆ ತಿಳಿದೇ ಇದೆ. ಇದರ ಕಾಂಡದ ಒಳಭಾಗವು ಡೊಗರಾಗಿರುವುದರಿಂದ, ಅದನ್ನು ಕೊರೆದು ಗಿಣ್ಣುಗಳನ್ನು ಕತ್ತರಿಸಿ ನೀರು ಹಾಯಿಸುವ ಕೊಳವೆಗಳನ್ನಾಗಿ ಉಪಯೋಗಿಸುತ್ತಾರೆ. ಜಪಾನಿನಲ್ಲಿ ಈ ಗಳುಗಳನ್ನು ಕಬ್ಬಿಣದ ಕಂಬಿಗಳಂತೆ ಉಪಯೋಗಿಸುವುದೂ ಉಂಟು. ನಮ್ಮ ದೇಶದಲ್ಲಿಯೂ ಸಹ, ಇವನ್ನು ಅಡ್ಡೆಗಳನ್ನೂ, ಏಣಿಗಳನ್ನೂ ತಯಾರಿಸುವುದಕ್ಕೂ, ಸೇತುವೆಗಳನ್ನು ಕಟ್ಟುವುದಕ್ಕೂ ಉಪಯೋಗಿಸುತ್ತಾರೆ. ಚೈನಾ ದೇಶದಲ್ಲಿ, ಬಿದಿರಿನಿಂದ ಪಕ್ಷಿಗಳ ಪಂಜರಗಳನ್ನೂ, ಆಟದ ಸಾಮಾನುಗಳನ್ನೂ ತಯಾರಿಸುತ್ತಾರೆ. ಇದೇ ಬಿದಿರಿನಿಂದ, ಬಿಲ್ಲು, ಬತ್ತಳಿಕೆ, ಬಾಣಗಳನ್ನು ಮಾಡುತ್ತಾರೆ.

ಸೀಳಿ ಹದಗೊಳಿಸಿದ ಬಿದಿರಿನಿಂದ ಅಮೆರಿಕಾ ಮತ್ತು ಇಂಗ್ಲೆಂಡಿನಲ್ಲಿ ಕುರ್ಚಿ, ಮೇಜು ಮುಂತಾದ ಅಂದವಾದ ಪೀಠೋಪಕರಣಗಳನ್ನು ಮಾಡಿ ಅದಕ್ಕೆ ಬಣ್ಣ ಬಳಿಯುತ್ತಾರೆ. ಮೈಸೂರು ನಗರದಲ್ಲಿರುವ ಟೆಕ್ನಲಾಜಿಕಲ್ ಇನ್‌ಸ್ಟಿಟ್ಯೂಟನಲ್ಲಿಯೂ, ಮದ್ರಾಸ್ ಪಟ್ಟಣದ ಪೂನಮಲ್ಲಿ ರಸ್ತೆಯಲ್ಲಿರುವ ಕುರುಡರ ಶಾಲೆಯಲ್ಲಿಯೂ, ಬಿದಿರಿನಿಂದ ಅತ್ಯುತ್ತಮವಾದ ಪೀಠೋಪಕರಣಗಳು ತಯಾರಾಗುತ್ತವೆ.

ಕಾಂಡದೊಳಗಿರುವ ನಾರಿನಂತಹ ಭಾಗವನ್ನು ತೆಗೆದು, ಕುಟೀರಗಳ ಗೋಡೆಗಳನ್ನೂ, ಚಾವಣಿಗಳನ್ನೂ ಕಟ್ಟುತ್ತಾರೆ. ' ಮಾರ್ಕೋಪೋಲೋ ' ಎಂಬ ಪ್ರಸಿದ್ಧ ಪ್ರಯಾಣಿಕನು ತನ್ನ ಆತ್ಮಕಥೆಯಲ್ಲಿ, ಏಷ್ಯಾಖಂಡದ ಅನೇಕ



ಮೀನನ್ನು ಹಿಡಿಯಲು ಬೊಂಬಿನಿಂದ ಬಲೆಯನ್ನು
ಕಟ್ಟುತ್ತಾರೆ.



ನೀರನ್ನು ಒಯ್ಯಲು, ಬೊಂಬನ್ನು ಅಡ್ಡೆಗಳಂತೆ
ಉಪಯೋಗಿಸುತ್ತಾರೆ.

ದೇಶಗಳಲ್ಲಿ ಸುಮಾರು ಮೂವತ್ತು ಅಡಿಗಳ ಉದ್ದವಾಗಿ ಬೆಳೆದ ಬಿದಿರು ಗಳನ್ನು ನೀಳವಾದ ಎಳೆಗಳಂತೆ ಸೀಳಿ ಹಗ್ಗದಂತೆ ಹೊಸೆಯುತ್ತಾರೆಂದು ಹೇಳಿದ್ದಾನೆ. ಹೀಗೆ ಹೊಸೆದ ಹಗ್ಗಗಳು ಆರುನೂರು ಅಡಿಗಳಷ್ಟು ಉದ್ದ ವಾಗಿದ್ದು ಹಡಗು ನಡೆಸಲು ಬರುತ್ತದೆಂದು ತಿಳಿದುಬಂದಿದೆ.

ಮಲಯ, ಚೈನಾ ಮತ್ತು ಜಪಾನ್ ದೇಶೀಯರು ಬಿದಿರಿನ ಎಳೆಯ ಕೊಂಬೆಗಳನ್ನೂ, ಎಲೆಗಳನ್ನೂ ಪಕ್ವಮಾಡಿ ಆಹಾರದಂತೆ ಸೇವಿಸುತ್ತಾರೆ. ನಮ್ಮ ದೇಶದಲ್ಲಿ, ಬಿದಿರುಕಳ್ಳೆ ಅಥವಾ ಮೋಸುಗಳೆಂದು ಕರೆಯಲ್ಪಡುವ ಬೀಜಗಳಿಂದ ಉಪ್ಪಿನಕಾಯನ್ನು ಹಾಕುತ್ತಾರೆ; ಕೋಸಂಬರಿಯನ್ನು ತಯಾ ರಿಸುತ್ತಾರೆ; ಈ ಬೀಜಗಳನ್ನು ಜೇನುತುಪ್ಪದಲ್ಲಿ ನೆನಸಿ ನಂತರ ಬೇಯಿಸು ತ್ತಾರೆ. ಇದಕ್ಕಾಗಿ, ಬಿದಿರಿನಿಂದಲೇ ನಿರ್ಮಿತವಾದ ಮಡಕೆಯನ್ನೇ ಉಪ ಯೋಗಿಸುತ್ತಾರೆ. (ಮಡಕೆಯಂತೆ, ಬಿದಿರಿನ ಅಡ್ಡಪಟ್ಟಿಗಳನ್ನು ಜೋಡಿಸಿ, ತಳದಲ್ಲಿ ಜೇಡಿಮಣ್ಣನ್ನು ಮಂದವಾಗಿ ಮೆತ್ತಿರುತ್ತಾರೆ.) ಮತ್ತೊಂದು ಜಾತಿಯ ಬಿದಿರು ರಸವತ್ತಾದ ಹಣ್ಣುಗಳನ್ನೂ ಕೊಡುತ್ತವೆ. ಇವು ಸೇಬು ಗಳಷ್ಟು ಗಾತ್ರವಾಗಿರುತ್ತವೆ. ಇವುಗಳು ಗೆಣಸಿನಂತೆ ಶುಷ್ಕಹಬೆಯಿಂದ ಬೇಯಿಸಿ ತಿನ್ನಲು ರುಚಿಯಾಗಿರುತ್ತವೆ.

ಚೈನಾ ದೇಶೀಯರು ಕಾಗದವನ್ನೂ ಸಹ ಬಿದಿರಿನಿಂದ ತಯಾರಿಸು ತ್ತಾರೆ. ಬಿದಿರಿನ ದಿಂಡನ್ನು ನೆನಸಿ, ಹದಗೊಳಿಸಿ ಅದರಿಂದ ಕಾಗದವನ್ನು ತಯಾರಿಸುತ್ತಾರೆ. ಆದರೆ, ಅಚ್ಚು ಹಾಕಲು, ಇಂತಹ ಕಾಗದವು ಉಪ ಯುಕ್ತವಾಗಿಲ್ಲ. ನಾವು ಈಗ ಉಪಯೋಗಿಸುವ ಕಾಗದವನ್ನು, ಮರಗಳ ತೊಗಟೆಗಳಿಂದಲೇ ತಯಾರಿಸುತ್ತಾರೆ. ಆದರೆ ಈ ಮರಗಳು ಬೆಳೆಯಲು ಬಹಳ ವರ್ಷಗಳು ಬೇಕಾಗುತ್ತವೆ. ದಿನದೊಳಗೆ ಎರಡು ಅಡಿಗಳಿಗೆ ಕಮ್ಮಿ ಯಿಲ್ಲದಂತೆ ಬೆಳೆಯುವ ಬಿದಿರಿನಿಂದ ಕಾಗದವನ್ನು ತಯಾರಿಸುವ ವಿಧಾನ ವನ್ನು ವಿಜ್ಞಾನಿಗಳು ಕಂಡುಹಿಡಿಯುವುದಾದರೆ, ನಮಗೆ ಕಾಗದವು ಹೇರಳ ವಾಗಿಯೂ, ಅಗ್ಗವಾಗಿಯೂ ದೊರೆಯುತ್ತದೆ.

## ಪ್ರಶ್ನೆಗಳು

೧. ಬಿದಿರಿನ ಗಿಡದ ಲಕ್ಷಣಗಳೇನು ?

೨. ಬಿದಿರಿನ ವಿವಿಧ ಭಾಗಗಳ ಉಪಯೋಗಗಳನ್ನು ತಿಳಿಸಿ.

# ಪ್ರಾಯಶ್ಚಿತ್ತ

ಅಷ್ಟೈಶ್ವರ್ಯ ಸಂಪನ್ನರಾಗಿ, ಉನ್ನತ ಪದವಿಯಲ್ಲಿದ್ದಾಗ ವಿದ್ಯಾವಂತರೂ, ಜ್ಞಾನಿಗಳೂ ಸಹ ಅನೇಕ ವೇಳೆ ಮೈಮರೆತು ಗುರುಹಿರಿಯರನ್ನು ತಿರಸ್ಕರಿಸುವುದುಂಟು. ದೇವತೆಗಳೂ ಸಹ ಹೀಗೆ ತಪ್ಪುಮಾಡಿ ದುಃಖ ಪರಂಪರೆಗಳನ್ನನುಭವಿಸದ್ದುಂಟು. ಇದನ್ನು ಕೆಳಗೆ ಕಂಡ ಕಥೆಯ ನಿದರ್ಶನದಿಂದ ಕೂಲಂಕಷವಾಗಿ ತಿಳಿಯಬಹುದು.

ಒಂದು ದಿನ, ಇಂದ್ರನು ಸ್ವರ್ಗಲೋಕದಲ್ಲಿ ಸಮಸ್ತ ದೇವತೆಗಳಿಂದಲೂ ಓಲೈಸಲ್ಪಟ್ಟವನಾಗಿ, ಮಹಾವೈಭವದಿಂದ ರಾರಾಜಿಸುತ್ತಿರುವಾಗ, ದೇವಗುರುವಾದ ಬೃಹಸ್ಪತ್ಯಾಚಾರ್ಯರು ಸಭೆಗೆ ದಯಮಾಡಿಸಿದರು. ಇಂದ್ರನಾದರೋ ಗರ್ವದಿಂದ ಉನ್ಮತ್ತನಾಗಿ, ತ್ರಿಮೂರ್ತಿಗಳಿಗೆ ಸಮನಾಗಿಯೂ ದೇವತೆಗಳ ಅಭ್ಯುದಯಕ್ಕೆ ಕಾರಣರೂ ಆದ ಗುರುವನ್ನು ಸತ್ಕರಿಸದೆ, ಅನಾದರಿಸಿ ಕುಳಿತಿದ್ದನು. ಈ ತಿರಸ್ಕಾರದಿಂದ ನೊಂದ ಬೃಹಸ್ಪತ್ಯಾಚಾರ್ಯರು ಸಭೆಯನ್ನು ಪರಿತ್ಯಾಗ ಮಾಡಿ ಹೊರಟುಹೋದರು. ಸ್ವಲ್ಪ ಹೊತ್ತಿನ ಬಳಿಕ, ದೇವೇಂದ್ರನಿಗೆ ತನ್ನ ಅಪರಾಧದ ಮಂದಟ್ಟಾಯಿತು. ಗುರುದೇವನ ಪಾದಕಮಲಗಳಲ್ಲಿ ತನ್ನ ಶಿರಸ್ಸನ್ನಿಟ್ಟು ದಯೆ ಸಂಪಾದಿಸಬೇಕೆಂದು ಉದ್ಯುಕ್ತನಾದ ಇಂದ್ರನಿಗೆ, ಆತನು ಅದೃಶ್ಯನಾಗಿದ್ದ ಸಂಗತಿಯು ತಿಳದುಬಂದಿತು. ಇದರಿಂದ ಇಂದ್ರನು ನೊಂದು ಕುಂದಿದನು. ಗುರುಕೃಪೆಯನ್ನು ಕಳೆದುಕೊಂಡ ದೇವತೆಗಳ ಬಲವು ತಗ್ಗಿ, ರಾಕ್ಷಸರ ಕೈ ಮೇಲಾಯಿತು. ಇದರಿಂದಾಗಿ ದಾನವರಿಗೆ ಜಯವುಂಟಾಗಲಾರಂಭವಾಯಿತು. ಇದಕ್ಕೆ ಅಸುರರು ತಮ್ಮ ಕುಲಗುರುಗಳಾದ ಶುಕ್ರಾಚಾರ್ಯರಲ್ಲಿಟ್ಟ ಅಪಾರ ಭಕ್ತಿಯೂ ಕಾರಣವಾಗಿತ್ತು.

ದೈತ್ಯರಿಂದ ಪರಾಜಿತರಾದ ದೇವತೆಗಳು ಬ್ರಹ್ಮನ ಮರೆಹೊಕ್ಕರು. ಆತನು ವಿಷಯಗಳನ್ನು ಅರಿತವನಾಗಿ, ಸಕಲ ಶ್ರೇಯಸ್ಸಿಗೂ ಗುರುಭಕ್ತಿಯೇ ಕಾರಣವೆಂದು ತಿಳಿಯಹೇಳಿದುದಲ್ಲದೆ, ಗುರುದೇವನು ಪ್ರಸನ್ನನಾಗುವವರೆಗೂ

ಒಬ್ಬ ಸೂಕ್ತ ಗುರುವನ್ನು ಪಡೆಯುವಂತೆ ಸಲಹೆಯಿತ್ತನು. ಅಲ್ಲದೆ, ತ್ವಷ್ಟೃ ಬ್ರಹ್ಮನ ಕುವರನೂ, ತಪಸ್ವಿಯೂ, ಆತ್ಮಜ್ಞಾನಿಯೂ, ಬ್ರಹ್ಮಚಾರಿಯೂ ಆದ ವಿಶ್ವರೂಪನನ್ನು ದೇವಗುರುವಾಗಿ ಸ್ವೀಕರಿಸುವಂತೆ ಉಪದೇಶಿಸಿದನು. ದೇವತೆಗಳು ವಿಶ್ವರೂಪನನ್ನು ಆಶ್ರಯಿಸಿ ತಮ್ಮ ಗುರುವಾಗುವಂತೆ ಕೇಳಿ ಕೊಂಡರು. ಅಷ್ಟಾಗಿ ಇಷ್ಟವಿಲ್ಲದಿದ್ದರೂ, ಆತನು ದೇವತೆಗಳ ಒತ್ತಾಯಕ್ಕಾಗಿ ದೇವಗುರುವಿನ ಪೀಠವನ್ನಲಂಕರಿಸಿದನು. ಆತನ ತಪೋಬಲದಿಂದ, ದೇವತೆಗಳು ಅಸುರರ ಕಾಟದಿಂದ ಮುಕ್ತರಾದರು. ಇಷ್ಟಾದರೂ, ದೇವೇಂದ್ರನು ವಿಶ್ವ ರೂಪನನ್ನು ಸಂಶಯ ದೃಷ್ಟಿಯಿಂದಲೇ ನೋಡುತ್ತಿದ್ದನು; ಇದಕ್ಕೆ ಕಾರಣ, ವಿಶ್ವರೂಪನ ತಾಯಿಯು ಅಸುರಜೆಯಾಗಿದ್ದುದು. ಒಂದಲ್ಲ ಒಂದು ದಿನ, ಈ ಪುರೋಹಿತನು ದೈತ್ಯಕುಲ ಪಕ್ಷಪಾತಿಯಾಗಬಹುದೆಂಬ ಸಂಶಯವೃತ್ತಿಯುಳ್ಳ ವನಾಗಿ, ಒಳಗಿಂದೊಳಗೇ ಪರಿತಪಿಸುತ್ತಿದ್ದನು. ವಿಶ್ವರೂಪನ ತಪಶ್ಶಕ್ತಿಯನ್ನು ಕುಗ್ಗಿಸಿ, ಆತ್ಮಬಲವನ್ನು ತಗ್ಗಿಸಬೇಕೆಂಬ ಯತ್ನವುಳ್ಳವನಾಗಿ, ಅಪ್ಸರೆಯ ರನ್ನು ಕರೆದು ಆತನನ್ನು ಕಾಮಿಸಬೇಕೆಂದು ಪ್ರೇರೇಪಿಸಿ, ಕಳುಹಿಸಿಕೊಟ್ಟನು. ಮೋಹನಾಂಗಿಯರಾದ ಅಪ್ಸರೆಯರ ಮಾಯಾ ಶಾಪಕ್ಕೆ ಮುನಿಯು ಸೋಲ ಲಿಲ್ಲ. ಹೀಗೂ ಭಗ್ನಹೊಂದಿದ ಇಂದ್ರನು ತುಚ್ಛವಾದ ಆಲೋಚನೆಯನ್ನು ಮಾಡಿ, ಮುನಿಯು ಧ್ಯಾನಮಗ್ನ ಸಮಯದಲ್ಲಿ ಹೊಂಚುಹಾಕಿಕೊಂಡಿದ್ದು, ಆತನ ಶಿರಚ್ಛೇದನ ಮಾಡಿದನು. ತನ್ನ ಸ್ವಾರ್ಥಪರತೆಯ ಫಲವಾಗಿ ಇಂದ್ರನು ಬ್ರಹ್ಮಹತ್ಯಾ ದೋಷಕ್ಕೆ ಭಾಗಿಯಾಗಬೇಕಾಯಿತು. ಈ ಮಹಾಪಾತಕವನ್ನು ಒಂದು ವರ್ಷ ಪರ್ಯಂತ್ರವೂ ಭೂಲೋಕಕ್ಕೆ ಬಂದು ಅನುಭವಿಸುವುದರೊಳಗೆ ಆತನಿಗೆ ಸಾಕುಸಾಕಾಗಿ ಹೋಯಿತು. ಆ ಬಳಿಕ, ತನ್ನ ದೋಷವನ್ನು ಭೂಮಿ, ನೀರು, ಗಿಡ ಮತ್ತು ಸ್ತ್ರೀ ಇವರುಗಳಿಗೆ ಹಂಚಿಕೊಟ್ಟನು. ಭೂಮಿ ಯಲ್ಲಿ ಬಂಜರು, ವೃಕ್ಷಗಳಲ್ಲಿ ಗೋಂದು, ನೀರಿನಲ್ಲಿ ನೊರೆ, ಸ್ತ್ರೀಯರಲ್ಲಿ ಬಹಿಷ್ಟೆಯಾಗುವಿಕೆ ಈ ರೀತಿಯಾಗಿ ಈಗಲೂ ಇಂದ್ರನ ಪಾತಕವು ನಿಂತಿದೆ ಯೆಂದು ಪ್ರತೀತಿ ಇದೆ.

ವಿಶ್ವರೂಪನ ಮರಣವಾರ್ತೆಯನ್ನು ಸಮೂಲಾಗ್ರವಾಗಿ ತಿಳಿದ ತ್ವಷ್ಟರು ಕುಪಿತರಾಗಿ, ಒಂದು ಯಜ್ಞವನ್ನು ಮಾಡಿ, ಆ ಜ್ವಾಲೆಯಿಂದ ಒಬ್ಬ ಭಯಂಕರಾಕೃತಿಯುಳ್ಳ ಪುರುಷನನ್ನು ಸೃಷ್ಟಿಸಿದರು. ಆತನೇ ವೃತ್ರಾಸುರನು.

ಅವನನ್ನು ಕುರಿತು, ತ್ವಷ್ಟರು, " ಎಲೈ, ಇಂದ್ರಾರಿಯೆ! ಹೋಗು. ಇಂದ್ರನನ್ನು ಕೊಲ್ಲುವ ಸಾಮರ್ಥ್ಯವನ್ನು ಪಡೆ," ಎಂದು ಹರಿಸಿ ಬೀಳ್ಕೊಟ್ಟನು. ಆತನು ಅಮನುಷಾಕೃತಿಯನ್ನು ತಾಳಿ, ತ್ರಿಲೋಕಗಳೂ ತಲ್ಲಣಿಸುವಂತೆ ಗರ್ಜಿಸುತ್ತಾ ಇಂದ್ರನ ಮೇಲೆ ಯುದ್ಧಕ್ಕೆ ಹೊರಟನು. ಈ ಯುದ್ಧದಲ್ಲಿ ವೃತ್ರನ ಕೈ ಮೇಲಾಗಿ, ದೇವತೆಗಳು ಏಟುತಿಂದು ಕಂಗಾಲಾದರು. ನೊಂದ ಸುರರು ವಿಷ್ಣುವಿನ ಶರಣುಹೊಕ್ಕರು. ಕರುಣಾಳುವಾದ ಶ್ರೀಮನ್ನಾರಾಯಣನು ಅವರ ಸ್ತುತಿಗೆ ಮೆಚ್ಚಿ, ದಧೀಚಿಮುನಿಯ ಮರೆಹೊಕ್ಕು, ಆತನ ಬೆನ್ನುಮೂಳೆಗಳನ್ನು ಸಂಪಾದಿಸಿಕೊಂಡು, ಅವುಗಳಿಂದ ವಜ್ರಾಯುಧವನ್ನು ರಚಿಸಿಕೊಳ್ಳುವಂತೆ ಸಲಹೆಯಿತ್ತನು. ಈ ಕಾರ್ಯಸಾಧನೆಯಾಗುವವರೆಗ್ಗೂ ವೃತ್ರನಿಗೂ ಇಂದ್ರನಿಗೂ ಯುದ್ಧವನ್ನು ನಿಲ್ಲಿಸುವಂತೆ ಪ್ರಾರ್ಥಿಸಿಕೊಳ್ಳತಕ್ಕ, ದ್ದೆಂದೂ ಸೂಚಿಸಿದನು. ದೇವತೆಗಳು ವೃತ್ರನನ್ನು ಕುರಿತು, ಯುದ್ಧವನ್ನು ನಿಲ್ಲಿಸುವಂತೆ ಬೇಡಿಕೊಂಡರು. ವೃತ್ರಾಸುರನು, ದೇವತೆಗಳಿಗಾಗಿ ಯುದ್ಧವನ್ನು ನಿಲ್ಲಿಸುವುದಕ್ಕೆ ಒಪ್ಪಿಕೊಂಡು, ಅವರಿಂದ ತನಗೆ ಹಗಲಿನಲ್ಲಾಗಲೀ, ರಾತ್ರಿಯಲ್ಲಾಗಲೀ ಮತ್ತು ಯಾವ ಆಯುಧಗಳಿಂದಲೇ ಆಗಲಿ ಮರಣವುಂಟಾಗದಂತೆ ವರವನ್ನು ಪಡೆದನು.

ಹೀಗೆ ಕೆಲವು ವರ್ಷಗಳು ಕಳೆದವು. ಸ್ವಾರ್ಥನೂ, ಕುತ್ಸಿತನೂ ಆದ ಇಂದ್ರನು ಹೊಂಚುಹಾಕುತ್ತಲಿದ್ದು, ಸಾಯಂಸಮಯದಲ್ಲಿ ಏಕಾಂಗಿಯಾಗಿ ಸಮುದ್ರ ತೀರದಲ್ಲಿ ವಿಹರಿಸುತ್ತಿದ್ದ ವೃತ್ರನನ್ನು ಇದ್ದಕ್ಕಿದ್ದಂತೆಯೇ ಆಕ್ರಮಣ ಮಾಡಿದನು. ವೀರನಾದ ವೃತ್ರನು ಎದೆಗುಂದದೆ ಹೋರಾಡಿದನು. ಅವನ ಮೇಲೆ ಪ್ರಯೋಗಮಾಡಿದ ಬಾಣಗಳು ಮತ್ತು ಆಯುಧಗಳೂ ವಿಫಲವಾದವು. ಯಜ್ಞಕುಂಡದಲ್ಲಿ ಜನಿಸಿದ ವೃತ್ರನು ಅಸುರಾಕಾರವನ್ನು ತಳೆದಿದ್ದರೂ, ಮಹಾಜ್ಞಾನಿಯಾಗಿಯೂ ವಿಷ್ಣುಭಕ್ತನಾಗಿಯೂ ಆಗಿದ್ದನು. ಕಂಗೆಟ್ಟು ಸೆಣಸಿ ಹೋರಾಡುತ್ತಿರುವ ಇಂದ್ರನನ್ನು ಕುರಿತು, ವೃತ್ರನು ' ಎಲೈ ಹೇಡಿಯೇ, ನೀಚನೇ, ಗುರುದ್ರೋಹಿಯೇ! ದಧೀಚಿಯ ದಯೆಯಿಂದ ತಯಾರಿಸಿದ ವಜ್ರಾಯುಧವನ್ನೇಕೆ ಉಪಯೋಗಿಸದೆ ಮತಿಗೆಟ್ಟಿರುವೆ? ನಾನು ರಣಹೇಡಿಯೂ ಅಲ್ಲ, ಸ್ವಾರ್ಥಪರನೂ ಅಲ್ಲ; ವಜ್ರಾಯುಧದಿಂದ

ಹತನಾದದ್ದೇ ಆದರೆ, ನಾನು ವಿಷ್ಣುಸಾಯುಜ್ಯವನ್ನು ಪಡೆಯುವೆನು.' ಎಂದು ಕೂಗಿ ಹೇಳಿದನು. ಇಂದ್ರನು ವಜ್ರಾಯುಧವನ್ನು ಪಯೋಗಿಸಿ ವೃತ್ತನ ತೋಳುಗಳನ್ನು ಕತ್ತರಿಸಿದನು. ಆದರೂ ಸಹ, ಆತನು ಧೃತಿಗೆಡದೆ ಹೋರಾಡುತ್ತಿದ್ದು, ಗುಹೆಯಂತಿದ್ದ ತನ್ನ ಬಾಯನ್ನು ತೆರೆದು ಇಂದ್ರನನ್ನು ನುಂಗಿಬಿಟ್ಟನು. ಇದನ್ನು ಕಂಡ ದೇವತೆಗಳು ಭಯಭ್ರಾಂತರಾಗಿ ಹಾಹಾ ಕಾರವನ್ನು ಮಾಡಿದರು. ಅಮೃತಪಾನಮಾಡಿದ್ದ ಇಂದ್ರನು ಮಡಿಯದೆ, ತನ್ನ ವಜ್ರಾಯುಧದಿಂದ ವೃತ್ತನ ಉದರವನ್ನು ಸೀಳಿಕೊಂಡು ಹೊರಕ್ಕೆ ಬರುತ್ತಾ, ಬದಿಯಲ್ಲಿದ್ದ ನೀರಿನೊಳಕ್ಕೆ ಹಾರಿಬಿದ್ದನು. ಇದರಿಂದ ಉತ್ಪನ್ನ ವಾದ ನೊರೆಯಲ್ಲಿ ವಿಷ್ಣುವಿನ ಶಕ್ತಿಯು ಅಡಗಿದ್ದಿತು. ನೊರೆಯು ಉಕ್ಕಿ, ಎದ್ದು ಆಯುಧವಾಗಿ ಪರಿಣಮಿಸಿ ವೃತ್ತನನ್ನು ಕೊಂದಿತು. ವೀರ ವೃತ್ತನ ದೇಹದಿಂದ ಆತ್ಮಜ್ಯೋತಿಯು ಎದ್ದು ಗಗನದಲ್ಲಿ ಮಾಯವಾಯಿತು. ವೃತ್ತಾ ಸುರನ ಸಂಹಾರವಾದ್ದರಿಂದ ದೇವತೆಗಳು ಪ್ರಫುಲ್ಲಚಿತ್ತರಾದರು; ಆದರೆ ಆ ಬಳಿಕ ಇಂದ್ರನಿಗೆ ತನ್ನ ಪಾಪದ ಪರಿಮಿತಿಯು ಅರಿವಾಯಿತು. ಮೋಸ ದಿಂದಲೂ, ಅಧರ್ಮದಿಂದಲೂ ತನ್ನ ಶತೃವನ್ನು ಕೊಂದ ನೆನಪಿನಿಂದ ಆತನು ಹೇಸಿ, ಅಮರಾವತಿಯನ್ನು ತ್ಯಜಿಸಿ, ಮುಖಮರೆಯಿಸಿಕೊಂಡನು.

ಮೇಲ್ಕಂಡ ಘಟನೆಯು ನಡೆಯುತ್ತಿರುವ ಕಾಲದಲ್ಲಿ, ಭೂಲೋಕ ವನ್ನು, ಧರ್ಮಪರಾಯಣನೂ, ಸತ್ಯಪ್ರಿಯನೂ, ನೂರು ಅಶ್ವಮೇಧ ಯಾಗ ಗಳನ್ನು ಮಾಡಿದ ಪುಣ್ಯಪುರುಷನ್ನೂ ಆದ 'ನಹುಷ' ನೆಂಬ ರಾಜಋಷಿಯು ಆಳುತ್ತಿದ್ದನು. ಇಂದ್ರನು ಸ್ವರ್ಗದಿಂದ ಕಣ್ಮರೆಯಾಗಿ ಹೊರಟುಹೋಗಲು ಅಲ್ಲಿ ಅನಾಯಕತ್ವವುಂಟಾಯಿತು. ಆದ್ದರಿಂದ, ದೇವತೆಗಳು ನಹುಷನನ್ನು ತಮ್ಮ ದೇವರಾಜನನ್ನಾಗಿ ಮಾಡಿಕೊಂಡರು. ಸ್ವಲ್ಪ ಕಾಲದವರೆಗೂ, ನಹುಷನು ವಿವೇಕಿಯಾಗಿಯೂ, ಸಜ್ಜನನಾಗಿಯೂ ಸ್ವರ್ಗವನ್ನಾಳುತ್ತಾ, ದೇವೇಂದ್ರನಿಗೂ ಮಿಗಿಲೆನಿಸಿಕೊಂಡನು. ಕ್ರಮೇಣ, ಸ್ವರ್ಗದ ವೈಭೋಗ ವಿಲಾಸಗಳಿಗೆ ಮನಸೋತು, ಉನ್ಮತ್ತನಾಗಿ ವಿಷಯಸುಖಗಳ ಕಡೆಗೆ ಮನಸ್ಸನ್ನು ಕೊಟ್ಟನು.

ಒಂದು ದಿನ, ಇಂದ್ರನ ಸತಿ ಶಚೀದೇವಿಯನ್ನು ನಹುಷನು ಕಂಡನು. ಆವಳ ರೂಪು ಲಾವಣ್ಯಗಳಿಗೆ ಬೆರಗಾಗಿ, ಹೇಗಾದರೂ ಆಕೆಯನ್ನು ಪಡೆಯು

ಬೇಕೆಂಬ ಇಷ್ಟವುಳ್ಳವನಾದನು. ದೇವತೆಗಳನ್ನು ಕರೆಸಿ, ಇಂದ್ರಾಣಿಯನ್ನು ತನ್ನ ಅರಮನೆಗೆ ಕರೆತರುವಂತೆ ಆಜ್ಞಾಪಿಸಿದನು. ಈ ವಿಷಸಂಕಲ್ಪವನ್ನು ತಿಳಿದು, ದೇವತೆಗಳು ಕಂಗಾಲಾದರು. ಸತೀಮಣಿಯಾದ ಶಚಿಯು ತತ್ತರಿಸಿ ಬೃಹಸ್ಪತ್ಯಾಚಾರ್ಯರ ಶರಣುಹೊಕ್ಕು, ತನ್ನ ಸತೀತ್ವವನ್ನು ರಕ್ಷಿಸಬೇಕೆಂದು ಅಂಗಲಾಚಿದಳು. ಗುರುದೇವನು, ಆಕೆಯನ್ನು ಸಂತೈಸಿ, ಇಂದ್ರನ ಪಾಪಕ್ಕೆ ಪ್ರಾಯಶ್ಚಿತವಾಗಿ ಮರಳಿ ಸ್ವರ್ಗಕ್ಕೆ ಹಿಂತಿರುಗುವ ಕಾಲವು ಸನ್ನಿಹಿತವಾಯಿತೆಂದು ಅಭಯವಚನವನ್ನು ಕೊಟ್ಟು ತನ್ನ ಆಶ್ರಯದಲ್ಲಿರಿಸಿಕೊಂಡನು. ಈ ಸಂಗತಿಯನ್ನು ತಿಳಿದ ನಹುಷನು ಕುಪಿತನಾದನು. ತ್ರಿಲೋಕಕ್ಕೆ ಒಡೆಯನಾದ ತನಗೆ ಸ್ವರ್ಗದಲ್ಲಿರುವವರೆಲ್ಲರ ಮೇಲೂ ಸರ್ವಾಧಿಕಾರವುಂಟೆಂದು ಗರ್ಜಿಸಿ, ದೇವತೆಗಳು ನೆಮ್ಮದಿಯಿಂದ ಇರಬೇಕಾದಲ್ಲಿ ಶಚಿದೇವಿಯನ್ನು ತನಗೊಪ್ಪಿಸತಕ್ಕದ್ದೆಂದೂ ವಿಧಿಸಿದನು. ಪತಿವ್ರತೆಯೂ, ಪರಸ್ತ್ರೀಯೂ ಆದ ಶಚಿಯನ್ನು ಹಾಗೆ ಬಯಸುವುದು ಮೂರ್ಖತನವೆಂದೂ, ತನ್ನ ಅಧಃಪತನಕ್ಕೆ ಕಾರಣವೆಂದೂ ಎಷ್ಟು ವಿಧವಾಗಿ ತಿಳಿಯಹೇಳಿದರೂ, ನಹುಷನು ವಿಧಿವಶದಿಂದ ಆ ಹಿತೋಕ್ತಿಗಳಿಗೆ ಕಿವಿಗೊಡಲಿಲ್ಲ. ಹತಾಶರಾದ ದೇವತೆಗಳು ಗುರುದೇವನ ಬಳಿಗೋಡಿ ನಹುಷನ ಆಜ್ಞೆಯನ್ನು ಬಿನ್ನಯಿಸಿಕೊಂಡರು. ಇಂದ್ರಾಣಿಯಾದರೋ ಹೆದರಿ ತಲ್ಲಣಿಸುತ್ತಾ ತನ್ನ ಮಾನಸಂರಕ್ಷಣೆಯನ್ನು ಮಾಡುವಂತೆ ಗುರುದೇವನ ಪಾದಗಳನ್ನು ಹಿಡಿದಳು. ಗುರುದೇವನು, ಆಕೆಯನ್ನು ಸಮಾಧಾನಪಡಿಸುತ್ತಾ, 'ಮಗಳೇ! ಪರಸ್ತ್ರೀ ಕಾಮುಖನಾದ ನಹುಷನು ನಾಶಹೊಂದುವ ಕಾಲವು ಸಮೀಪಿಸಿತು; ನೀನು ಧೃತಿಗೆಡದೆ, ಹೋಗಿ ಆತನನ್ನು ಒಲಿದಂತೆ ನಟಿಸು. ನಿನ್ನ ಶೀಲಭಂಗವಾಗದಂತೆ, ಆತನಿಂದ ಸ್ವಲ್ಪ ಕಾಲಾವಕಾಶವನ್ನು ಪಡೆದು, ನಿನ್ನ ಪತಿಯು ಇದ್ದಾನೆಯೋ ಇಲ್ಲವೋ ಎಂಬುದನ್ನು ನಿರ್ಧರಿಸಿಕೊಂಡು ಆತನ ಬಳಿಗೆ ಸಾರುವುದಾಗಿ ಹೇಳಿಕೊಂಡು ಬಾ," ಎಂದು ಹೇಳಿ ಕಳುಹಿಸಿಕೊಟ್ಟನು.

ಒಲ್ಲದ ಮನಸ್ಸಿನಿಂದ, ಶಚಿದೇವಿಯು ಕಾಮುಕ ನಹುಷನಿದ್ದೆಡೆಗೆ ತೆರಳಿ, ಆತನನ್ನು ಕರಿತು, "ಅಯ್ಯಾ ರಾಜಶ್ರೇಷ್ಟನೇ! ನಾನು ನಿನ್ನನ್ನು ಒಲಿದು ಬಂದಿರುವೆನು. ಆದರೆ, ಇಂದ್ರನು ಜೀವಿತವಾಗಿರುವನೋ ಇಲ್ಲವೋ ಎಂಬುದನ್ನು ನಿರ್ಧರಿಸಿಕೊಂಡಿಲ್ಲ. ನಾನು ನಿನ್ನನ್ನು ಏಕಾಗ್ರತೆಯಿಂದ

ಸೇವಿಸಿ, ನಿನ್ನವಳಾಗಬಹುದು. ಆದ್ದರಿಂದ, ನನಗೆ ಸ್ವಲ್ಪ ಅವಧಿಯನ್ನು ಕೊಟ್ಟುಕಳುಹಿಸು," ಎಂದು ನಹುಷನ ಮನಕರಗುವಂತೆ ಬಿನ್ನಯಿಸಿ ಕೊಂಡಳು. ನಹುಷನು ಆಕೆಯ ಬೇಡಿಕೆಗೆ ಒಪ್ಪಿ, ಕಳುಹಿಸಿಕೊಟ್ಟನು. ಅಲ್ಲಿಂದ ಹೊರಟ ಶಚಿದೇವಿಯು, ಗುರುದೇವನ ತಪಃಶ್ಶಕ್ತಿಯ ಪ್ರಭಾವ ದಿಂದ ಇಂದ್ರನ ಬಳಿಗೆ ಹೊರಟುಬಂದಳು. ಇಂದ್ರನಾದರೋ, ತನ್ನ ಪಾಪದ ಕಳಂಕವನ್ನು ತೊಳೆದುಹಾಕಲು, ತಾನು ಒಂದು ಅಣುವಿನಂತಾಗಿ ಮಾನಸಸರೋವರದಲ್ಲಿ ರಾರಾಜಿಸುವ ಒಂದು ಕಮಲಪುಷ್ಪದೊಳಗೆ ಅಡಗಿ ಕೊಂಡಿದ್ದನು. ಅಲ್ಲದೆ ಶ್ರೀಮನ್ನಾರಾಯಣನನ್ನು ಕುರಿತು ತಪಸ್ಸುಮಾಡು ತ್ತಿದ್ದನು. ಪತಿಯನ್ನು ಕಂಡ ಶಚಿದೇವಿಯು ತನ್ನ ಸಂಕಟವನ್ನೆಲ್ಲಾ ತೋಡಿಕೊಂಡು ಮನಕರಗಿದಳಾಗಿ ಅತ್ತುಬಿಟ್ಟಳು. ಇಂದ್ರನು ತನ್ನ ವಲ್ಲಭೆ ಯನ್ನು ಸಂತೈಸುತ್ತಾ, 'ದೇವಿ, ಅಧೀರಳಾಗಬೇಡ, ನಿನ್ನ ಸೌಭಾಗ್ಯದಿಂದ ನನ್ನ ದುರ್ದಿನಗಳು ಕಳೆದುಹೋಗುವ ಕಾಲವು ಸನ್ನಿಹಿತವಾಗಿದೆ. ನೀನು ಸ್ವರ್ಗಕ್ಕೆ ತೆರಳಿ, ನಹುಷನನ್ನು ಒಲಿದವಳಂತೆ ನಟಿಸಿ, ಆತನು, 'ಸಪ್ತಋಷಿ ಗಳಿಂದ ಹೊರಲ್ಪಟ್ಟ ಪಲ್ಲಕ್ಕಿ' ಯಲ್ಲಿ ಕುಳಿತು ನಿನ್ನ ಅಂತಃಪುರಕ್ಕೆ ಬರು ವಂತೆ ಒಡಂಬಡಿಸುವವಳಾಗು. ಇದರಿಂದ, ನಮ್ಮ ಅಭೀಷ್ಟವು ಸಿದ್ಧಿಸು ವುದು," ಎಂದು ಹೇಳಿ ಆಕೆಯನ್ನು ಕಳುಹಿಸಿಕೊಟ್ಟನು.

ಶಚಿದೇವಿಯು ಮರಳಿ ನಹುಷನ ಬಳಿಗೆ ತೆರಳಿದಳು. ಇವಳನ್ನು ಕಂಡು ನಹುಷನು ಮೋಹದಿಂದ ಉನ್ಮತ್ತನಾಗಿ, ಆಕೆಯನ್ನು ಕುರಿತು, "ಎಲೌ! ಪೌಲೋಮಿ! ನೀನು ವಚನಕೊಟ್ಟಂತೆ ಬಂದವಳಾದೆ. ನಾನು ತ್ರಿಲೋಕಕ್ಕೆ ಒಡೆಯನಾದರೂ ನಿನ್ನ ರೂಪುಲಾವಣ್ಯಗಳಿಗೆ ಮಾರು ಹೋಗಿರುವೆನಾದ್ದರಿಂದ, ನಾನು ನನ್ನ ಸರ್ವಸ್ವವನ್ನೂ ನಿನಗೆ ಒಪ್ಪಿಸಿ ದಾಸಾನುದಾಸನಾಗಿರುವೆನು," ಎಂದು ಪ್ರಲಾಪಿಸಿಕೊಂಡನು. ಶಚಿಯು ಮತ್ತೂ ಹಸನ್ಮುಖಿಯಾಗಿ, "ತ್ರಿಲೋಕೇಶ್ವರಾ! ನಾನು ನಿನ್ನನ್ನು ಒಲಿದು ಬಂದಿರುವೆನು; ಇನ್ನು ನಾನು ನಿನ್ನವಳೇ ಸರಿ. ಆದರೆ ನನ್ನದೊಂದು ಮಹತ್ತರವಾದ ಆಶೆಯಿದೆ. ನೀನು ಸುರಲೋಕಾಧಿಪತಿಯಾಗಿರುವುದರಿಂದ, ನಿನ್ನ ಪದವಿಗೆ ತಕ್ಕಂತೆ ವೈಭವವಿಂದ ನೀನು ನನ್ನ ಅಂತಃಪುರಕ್ಕೆ ಆಗಮಿಸ ಬೇಕು; ಅಲ್ಲದೆ, ನೀನು ಕುಳಿತುಬರುವ ಪಲ್ಲಕ್ಕಿಯನ್ನು ಸಪ್ತಋಷಿಗಳು

ಹೊತ್ತುತರಬೇಕು. ಈ ನನ್ನ ಹೆಬ್ಬಯಕೆಯನ್ನು ನೀನು ಈಡೇರಿಸುವು ದಾದರೆ, ನಾನು ಎಂದೆಂದಿಗೂ ನಿನ್ನ ಮನೋವಲ್ಲಭೆಯಾಗಿರತಕ್ಕವಳೇ ಸರಿ," ಎಂದು ನುಡಿದಳು.

ಪದವೀಮದದಿಂದಲೂ, ಕಾಮದಿಂದಲೂ ಉದ್ರೇಕನಾದ ಮೂರ್ಖ ನಹುಷನು ಶಚಿಯ ಅಭೀಷ್ಟವನ್ನು ನೆರವೇರಿಸುವುದಕ್ಕಾಗಿ, ರತ್ನಖಚಿತವಾದ ಪಲ್ಲಕ್ಕಿಯಲ್ಲಿ ಕುಳಿತು, ಸಪ್ತಋಷಿಗಳನ್ನು ಕರೆದು ತನ್ನ ಪಲ್ಲಕ್ಕಿಯನ್ನು ಹೊರುವಂತೆ ಆಜ್ಞಾಪಿಸಿದನು. ತಮ್ಮ ತಪಃಪ್ರಭಾವದಿಂದ ಎಲ್ಲವನ್ನೂ ಅರಿತಿದ್ದ ಸಪ್ತಋಷಿಗಳು ಕಾರ್ಯಸಾಧನೆಗಾಗಿ, ಪಲ್ಲಕ್ಕಿಯನ್ನು ಮರು ಮಾತನಾಡದೆ ನಮ್ರತೆಯಿಂದ ಹೊತ್ತು ನಡೆದರು. ಅವರು ಆದಷ್ಟು ವೇಗವಾಗಿ ನಡೆಯುತ್ತಿದ್ದರೂ ಅವನ ಮನೋವೇಗಕ್ಕೆ ಸರಿತೂಗಲಿಲ್ಲ. ಆದ್ದರಿಂದ, ನಹುಷನು, ಅವರನ್ನು ಕುರಿತು, 'ನಡೆಯಿರಿ, ತ್ವರೆಮಾಡಿರಿ, ಮೂರ್ಖರಿರಾ,' ಎಂದು ಗರ್ಜಿಸುತ್ತಲೇ ಇದ್ದನು. ಇಷ್ಟೂ ಸಾಲದೆ, ಮದಾಂಧನಾದ ಅರಸನು ವೈಮರೆತು, ತನ್ನ ಸಮೀಪದಲ್ಲಿದ್ದ ಸಪ್ತಋಷಿ ಗಳಲ್ಲೋರ್ವರಾದ ಅಗಸ್ತ್ಯರನ್ನು ಒದ್ದು, 'ಎಲೈ! ಮುದಿಗೃದ್ಧವೇ, ಸರ್ಪ! ಸರ್ಪ' (ಸರ್ಪವೆಂದರೆ ಬೇಗ ನಡೆಯೆಂತಲೂ, ಹಾವು ಎಂತಲೂ ಎರಡು ಅರ್ಥಗಳು) ಎಂದು ಮೂದಲಿಸಿದನು. ಕುಪಿತನಾದ ಅಗಸ್ತ್ಯಋಷಿಯು, 'ಮೂರ್ಖ, ನೀನು ಕಾಮೋನ್ಮತ್ತನಾಗಿರುವೆ, ನೀನು ಸರ್ಪವಾಗಿಯೇ, ಭೂಮಿಯಮೇಲೆ ಬಿದ್ದು ಶಾಪದ ಫಲವನ್ನನುಭವಿಸುವವನಾಗು," ಎಂದು ಒಡನೆಯೇ ಶಾಪವನ್ನು ಕೊಟ್ಟರು. ಆ ಕ್ಷಣದಲ್ಲಿಯೇ, ನಹುಷನು ಸರ್ಪ ವಾಗಿ ಭೂಮಿಯಮೇಲೆ ಬಿದ್ದು, ಸಹಸ್ರಾರು ವರ್ಷಗಳವರೆಗೂ, ಶಾಪವ ನ್ನನುಭವಿಸಬೇಕಾಯಿತು. ಪುಣ್ಯಪುರುಷನೂ ರಾಜಋಷಿಯೂ ಆದ ನಹುಷನು ಅರಿಷಡ್ವರ್ಗಗಳನ್ನು ಜಯಿಸಲಾರದವನಾಗಿ ದುಃಖಪರಂಪರೆಗಳಿಗೆ ಗುರಿಯಾಗಬೇಕಾಯಿತು.

ಇಂದ್ರನು ಈ ವೇಳೆಗೆ ತನ್ನ ಪಾಪಬಂಧನದಿಂದ ಮುಕ್ತನಾಗಿ, ಪರಿಶುದ್ಧನಾಗಿ ಸ್ವರ್ಗವನ್ನಡರಿ ತನ್ನ ಪೂರ್ವಸ್ಥಾನವನ್ನು ಪಡೆದು, ಶಚಿ ದೇವಿಯ ದುಃಖವನ್ನು ನಿವಾರಿಸಿದನು.

ಹೀಗೆ ಯಜ್ಞಯಾಗಾದಿ ಕರ್ಮಗಳನ್ನಾಚರಿಸಿ ತಪೋನಿಧಿಗಳಾದ

ದೇವತೆಗಳೇ, ಅರಿಷಡ್ವರ್ಗಗಳನ್ನು ಗೆಲ್ಲದವರಾಗಿ, ಧರ್ಮಭ್ರಷ್ಟರಾಗುವಾಗ, ಸಹಜವಾಗಿ ದುರ್ಬಲನಾದ ಮಾನವನು ಮೋಹಮಾಯೆಗಳಿಗೆ ಪರವಶನಾಗಿ ಸ್ವಾರ್ಥಿಗಳಾಗುವದರಲ್ಲಿ ಆಶ್ಚರ್ಯವೇನಿಲ್ಲ!

## ಪ್ರಶ್ನೆಗಳು

೧. 'ಗುರುವನ್ನು ತಿರಸ್ಕರಿಸಿದರೆ, ದುಃಖಪರಂಪರೆಗಳು ಒದಗುತ್ತವೆ.' ಹೇಗೆಂಬುದನ್ನು ಒಂದು ನಿದರ್ಶನದಿಂದ ಸ್ಪಷ್ಟಪಡಿಸಿ.

೨. 'ವೃತ್ತನನ್ನು ಇಂದ್ರನು ಆಕ್ರಮಿಸಿದುದು, ಧರ್ಮಯುದ್ಧದ ರೀತಿಗೆ ವಿರುದ್ಧವಾದುದು,' ಹೇಗೆ?

೩. ನಹುಷನು ಸ್ವರ್ಗಾಧಿಪತಿಯಾಗಲು ಹೇಗೆ ಅರ್ಹನಾಗಿದ್ದನು?

೪. ನಹುಷನನ್ನು ಪದಚ್ಯುತನನ್ನಾಗಿ ಮಾಡಲು ಕೈಗೊಂಡ ಉಪಾಯಗಳಾವುವು?

೫. ನಹುಷನ ಅಧಃಪತನವು ಹೇಗೆ ಉಂಟಾಯಿತು? ವಿವರಿಸಿ.

# ಅಪೂರ್ವ ಸಹೋದರರು

ಕೌರವರ ಸೇಡಿನ ಕಿಡಿಗೆ ಆಹುತರಾದ ಪಾಂಡವರು ದೀರ್ಘಕಾಲ ವನವಾಸವನ್ನು ಅನುಭವಿಸಿದ್ದು ಕ್ಲೇಶದಾಯಕವಾಗಿದ್ದಿತಾದರೂ ಸಹ, ಆ ಅವಧಿಯಲ್ಲಿ ಪ್ರಾಪ್ತವಾದ ಅಮೂಲ್ಯ ಫಲಗಳನ್ನು ಅಲ್ಲಗಳೆಯುವಂತಿಲ್ಲ. ಪಾಂಡವರು ಕಾಮ್ಯಕವನದಲ್ಲಿ ಧರ್ಮನಿರತನಾಗಿ ಕಾಲಯಾಪನೆ ಮಾಡುತ್ತಿದ್ದಾಗ, ವೇದವ್ಯಾಸರ ಉಪದೇಶದಂತೆ ಅರ್ಜುನನು ಹಿಮವತ್ಪರ್ವತಕ್ಕೆ ಹೋಗಿ ಮಹಾದೇವನನ್ನು ಕುರಿತು ತಪಸ್ಸನ್ನು ಮಾಡಿ ಪಾಶುಪತಾಸ್ತ್ರವನ್ನು ಪಡೆಯಲು ಹೋದನು. ಹೀಗೆ ಕೆಲವು ತಿಂಗಳುಗಳು ಕಳೆದನಂತರ, ಅರ್ಜುನನಿಲ್ಲದ ಕಾಮ್ಯಕವನವು ಇನ್ನುಳಿದವರಿಗೆ ರುಚಿಸದಾಯಿತು. ಅದರಲ್ಲಿಯೂ, ಪಾಂಚಾಲಿಯು ಕಾಮ್ಯಕವನದಲ್ಲಿ ಪಾರ್ಥನನ್ನಗಲಿ ಇರಲಾರದವಳಾದಳು. ಆದ್ದರಿಂದ, ಪಾರ್ಥನು ನಿರ್ಗಮಿಸಿದ್ದ ಹಿಮವತ್ಪರ್ವತದ ಕಡೆಗೆ ಅವರು ತೆರಳಿ, ಅಲ್ಲಿನ ನಾರಾಯಣಾಶ್ರಮಕ್ಕೆ ಹೋಗಿ ನೆಲಸಿದರು.

ಒಂದು ದಿನ, ಹಿಮವತ್ಪರ್ವತದ ಕಡೆಯಿಂದ ಗಾಳಿಯು ಬೀಸಿ, ಒಂದು ಅಪೂರ್ವ ಸುವಾಸನೆಯುಳ್ಳ ಪುಷ್ಪವು ದ್ರೌಪದಿಯ ಮುಂದೆ ಬಿದ್ದಿತು. ಅದರ ಸೊಬಗು, ಸುಗಂಧಗಳಿಂದ ಪ್ರಫುಲ್ಲಳಾದ ಪಾಂಚಾಲಿಯು ಅದನ್ನು ಭೀಮಸೇನನಿಗೆ ತೋರಿಸಿ ಮತ್ತಷ್ಟು ಆ ಹೂಗಳನ್ನು ತನಗೆ ತಂದುಕೊಡಬೇಕೆಂದು ಪ್ರಾರ್ಥಿಸಿದಳು. ಪ್ರಿಯಪತ್ನಿಯ ಅಭೀಷ್ಟವನ್ನು ನೆರವೇರಿಸುವುದರಲ್ಲಿ ಸದಾ ಸಿದ್ಧನಾಗಿದ್ದ ಭೀಮನು ಆ ಕೂಡಲೇ ಧರ್ಮರಾಯನ ಅನುಜ್ಞೆಯನ್ನು ಪಡೆದು ಸುಗಂಧ ಮಾರುತವು ಬೀಸುತ್ತಿದ್ದ ದಿಕ್ಕನ್ನೇ ಹಿಡಿದು ಹೊರಟನು. ಆ ಮಾರ್ಗದಲ್ಲಿ ಹೋಗುವಾಗ ಅನೇಕ ದುಷ್ಟ ಮೃಗಗಳೂ ಕಲ್ಲು ಗುಡ್ಡಗಳೂ ಇದಿರಾದುವು. ಹೀಗೆ ನಡೆದು ಒಂದು ಘೋರಾರಣ್ಯವನ್ನು ಪ್ರವೇಶಿಸಿದ ಕೂಡಲೆ, ಅಲ್ಲಿ ಒಂದು ಬಾಳೆಯ ತೋಟವು ಗೋಚರಿಸಿತು. ಅವನು ಆ ತೋಟದಲ್ಲಿ ನಡೆಯುತ್ತಿದ್ದಾಗ, ದಾರಿಗೆ ಅಡ್ಡಲಾಗಿ ಅಗ್ನಿಯಂತೆ ಹೊಳೆಯುತ್ತಿದ್ದ ಒಂದು ಮುದಿ ಕೋತಿಯು ಮಲಗಿತ್ತು. ಬಲದಲ್ಲಿ

ಸಹಸ್ರಾರು ಗಜಗಳಿಗೆ ಸರಿಸಮಾನನೆಂದೆನಿಸಿದ ಭೀಮಸೇನನಿಗೆ ಆ ಮುದಿ ಕೋತಿಯ ಅಡ್ಡಿಯು ಯಾವ ಗಣನೆ? ಆತನು, ಅದನ್ನು ಹೂಂಕಾರ ದಿಂದಲೇ ಹೆದರಿಸುವ ಪ್ರಯತ್ನಪಟ್ಟನು. ಆದರೆ ಆ ಕೋತಿಯು ಸ್ವಲ್ಪವೂ ಉದ್ರೇಕಗೊಳ್ಳದೆ ನಿಧಾನವಾಗಿ ಕಣ್ದೆರೆಯುತ್ತಾ ವೃಕೋದರನನ್ನು ಕುರಿತು, 'ಅಯ್ಯಾ ಮಹಾಪುರುಷನೇ, ನಾನು ಖುಗ್ಣನಾದ ವೃದ್ಧ; ಆದ್ದರಿಂದ ವಿಶ್ರಾಂತಿಗಾಗಿ ಇಲ್ಲಿ ಮಲಗಿರುವೆನು. ನೀನು ನನ್ನನ್ನು ಬೆದರಿಸಿ ಏಳಿಸ ಬೇಕೆಂದಿರುವ ಪ್ರಯತ್ನವನ್ನು ನೋಡಿದರೆ, ಪ್ರಾಣಿಗಳಿಗೆ ದಯೆ ತೋರಿಸ ಬೇಕೆಂಬ ಧರ್ಮಶಾಸ್ತ್ರವನ್ನು ನೀನು ಅರಿತಂತೆ ತೋರುವುದಿಲ್ಲವಲ್ಲಾ! ಅದಿರಲಿ, ನೀನು ಯಾರಪ್ಪಾ! ನಿರ್ಜನವಾದ ಈ ಘೋರಾರಣ್ಯಕ್ಕೆ ಏಕೆ ಬಂದಿರುವೆ. ಮನುಷ್ಯ ಮಾತ್ರದವರು ಈ ವನವನ್ನತಿಕ್ರಮಿಸಿ ಮುಂದೆ ಹೋದುದಿಲ್ಲವಲ್ಲಾ! ನನ್ನ ಬುದ್ಧಿವಾದವನ್ನು ಕೇಳಿ, ಒಡನೆಯೇ ಸಜೀವಿ ಯಾಗಿ ಹಿಂತಿರುಗು,' ಎಂದು ಮೃದುವಾಗಿ ಹೇಳಿತು. ಈ ಮಾತನ್ನು ಕೇಳಿ ಭೀಮನು ಮತ್ತೂ ತಾಳ್ಮೆಗೆಟ್ಟನು. ಪ್ರತ್ಯುತ್ತರವಾಗಿ ಆ ಕಪಿಯನ್ನು ಕುರಿತು, 'ಅಹಹಾ ಕಪಿಯೇ, ಎಷ್ಟೊಂದು ಹರಟುವೆ? ನಾನು ಯಾರೆಂದು ಕೇಳು ವೆಯಾ! ಹೂಂ–ಹಾಗಿದ್ದಲ್ಲಿ ಹೇಳುವೆನು ಕೇಳು. ಕುರುವಂಶಜ ಪಾಂಡವ ರಲ್ಲಿ ಎರಡನೆಯನಾದ ಭೀಮಸೇನನೇ ನಾನು. ನನ್ನ ಹೆಸರೇ ನನ್ನ ಶತ್ರು ಗಳಿಗೆ ಸಿಂಹಪ್ರಾಯವಾಗಿದೆ. ಹಿಡಿಂಬ, ಬಕಾಸುರ ಮುಂತಾದ ದೈತ್ಯರ ಅಂತಕನೂ ನಾನೇ. ವಾಯುವಿನ ಅಂಶದಿಂದ ಜನಿಸಿದ ನಾನು ಅಜೇಯನು. ಪೂರ್ವಯುಗದಲ್ಲಿ, ನೂರು ಯೋಜನ ಅಗಲವುಳ್ಳ ಸಮುದ್ರವನ್ನು ದಾಟಿ, ಲಂಕಾಧಿಪನಿಗೆ ಶ್ರೀರಾಮಚಂದ್ರನ ಪರವಾಗಿ ದೂತವಾಕ್ಯವನ್ನು ತೆಗೆದು ಕೊಂಡು ಹೋದ ಮಾರುತಿಯೂ ನನ್ನ ಅಗ್ರಜನು. ಇನ್ನು ವಿಳಂಬ ಸಾಕು. ಹಾದಿಯನ್ನು ಬಿಟ್ಟೋಡುವವನಾಗು," ಎಂದು ಡಾಂಭಿಕತನದಿಂದ ನುಡಿದನು.

ಆಗಲೂ ಸಹ, ಆ ಕೋತಿಯು ಸ್ವಲ್ಪವೂ ಕೋಪಿಸಿಕೊಳ್ಳಲಿಲ್ಲ. ಮತ್ತೂ ನಮ್ರನಾಗಿ ಭೀಮನನ್ನುದ್ದೇಶಿಸಿ, "ಅಯ್ಯಾ ಕ್ಷತ್ರಿಯ ಶ್ರೇಷ್ಠನೆ, ನೀನು ಅಸಮ ಸಾಹಸಿಯೆಂಬುದೇನೋ ಸರಿ! ನಿನ್ನ ಅಗ್ರಜನೊಬ್ಬನು ಮಾರುತಿ ಯೆಂದೆಯಲ್ಲಾ! ಆತನೆಲ್ಲಿರುವನು? ನೀನು ಆತನನ್ನು ನೋಡಿರುವೆಯಾ! ನಾನು ಆತನ ಸಂದರ್ಶನ ಪಡೆಯಬಹುದೇ?" ಎಂದು ಪ್ರಶ್ನಿಸಿದನು.

ಭೀಮನು ವಿಕಟವಾಗಿ ನಗುತ್ತಾ ‘ ಆಯ್ಯೋ ಮುದಿ ಕೋತಿಯೇ, ಆ ಮಾರುತಿಯು ವಾಯುಪುತ್ರನು. ಹನುಮಂತನೆಂಬ ನಾಮಧೇಯವುಳ್ಳವನು ; ಸುಗ್ರೀವನ ಆಪ್ತಸಚಿವನು ; ಶ್ರೀರಾಮಚಂದ್ರನ ಪರಮಭಕ್ತನು. ರಾವಣನಿಂದ ಅಪಹರಿಸಲ್ಪಟ್ಟು ಅಶೋಕವನದಲ್ಲಿ ಬಂಧಿಸಲ್ಪಟ್ಟಿದ್ದ ಸೀತಾಮಾತೆಯು ನೆಲೆಯನ್ನು ತಿಳಿಯಲು ಸಹಾಯಕನಾದವನು ” ಎಂದು ಹೇಳಿದನು. ಕೋತಿಯು ಭೀಮನ ಮಾತನ್ನು ಕೇಳಿ ತಲೆದೂಗುತ್ತಾ, “ಸರಿ ಸರಿ ! ನಿನ್ನ ಪೂರ್ವೋತ್ತರವನ್ನು ತಿಳಿದಂತಾಯಿತು. ಆದರೂ ನೀನು ಈ ಗಡಿಯನ್ನು ಅತಿಕ್ರಮಿಸಿ ಮುಂದೆ ಹೋಗುವುದಾದರೆ ಅಪಾಯಕ್ಕೆ ಒಳಗಾಗುವೆ. ನನ್ನ ಹಿತೋಕ್ತಿಗಳು ನಿನಗೆ ರುಚಿಸದಿದ್ದಲ್ಲಿ, ನನ್ನ ಅಭ್ಯಂತರವಿಲ್ಲ ; ನೀನು ಮುಂದಕ್ಕೆ ತೆರಳಬಹುದು. ಆದರೆ, ನಾನು ಎದ್ದು ನಿನಗೆ ದಾರಿ ಮಾಡಿ ಕೊಡಲು ನನಗೆ ಪಟುತ್ವವಿಲ್ಲ. ದಯಮಾಡಿ ನೀನೇ ನನ್ನ ಬಾಲವನ್ನು ಒಂದು ಬದಿಗೆ ಒತ್ತರಿಸಿ, ಹಾದಿಮಾಡಿಕೊಳ್ಳುವವನಾಗಯ್ಯ,” ಎಂದು ದೈನ್ಯತೆಯಿಂದ ಉತ್ತರಿಸಿದನು. ಭೀಮನು ಹೂಂಕರಿಸುತ್ತಾ,“ಬಾಲವನ್ನೇಕೆ ! ನಿನ್ನನ್ನೇ ಎತ್ತಿಹಾಕಿಬಿಡಬಲ್ಲೆ. ಇಲ್ಲವೇ ನಿನ್ನನ್ನು ಹಾರಿಕೊಂಡೇ ಹೋಗಬಲ್ಲೆನು. ಆದರೆ ಪ್ರಾಣಿಗಳನ್ನು ದಾಟಿ ಹೋಗುವುದು ಕ್ಷತ್ರಿಯನಿಗೆ ಕಳಂಕಪ್ರದವಾದುದು. ಆದ್ದರಿಂದ, ನಿನ್ನ ಬಾಲವನ್ನೇ ಒತ್ತರಿಸಿಕೊಂಡು ಹೋಗುವೆನು,” ಎಂದು ಗರ್ಜಿಸಿದನು. ಹೀಗೆ ಹೇಳಿ, ಆ ವೃಕೋದರನು ಕಪಿಯ ಬಾಲವನ್ನು ಎತ್ತಿಹಾಕಲು ಅನುವಾದನು. “ ಆಶ್ಚರ್ಯ ! ತನ್ನ ಸ್ನಾಯುಗಳನ್ನೆಲ್ಲಾ ಹಿಗ್ಗಿಸಿ, ಜಂಘಾಬಲವನ್ನೆಲ್ಲಾ ಪ್ರಯೋಗಿಸಿದರೂ ಆ ಕಪಿಯ ಬಾಲವನ್ನೆತ್ತುವುದು ಭೀಮನಿಂದಾಗಲಿಲ್ಲ. ಭ್ರಾಂತಿಗೊಂಡ ಆತನ ಹಣೆಯ ಮೇಲೆ ಬೆವರು ಹನಿಗಳು ಮೂಡಿದವು. ಆಗ, ಅವನ ಸೊಕ್ಕು ಇಳಿಯಿತು. ತನ್ನ ಶಕ್ತಿಗೆ ಮೀರಿದವರು ಮತ್ತೊಬ್ಬರಿಲ್ಲವೆಂಬ ಅಹಂಭಾವದಿಂದ ಮೈಮರೆತ ಭೀಮನಿಗೆ ತನಗ್ಗಿಂತ ಮಿಗಿಲಾದ ಸಾಹಸಿಗಳಿರುವರೆಂಬ ಜ್ಞಾನವು ಹೊಳೆದು ಆತನ ಮನಸ್ಸು ಮುದುಡಿಕೊಂಡಿತು. ಭೀಮನು ನಮ್ರನಾಗಿ, ವಿಧೇಯನಾಗಿ, ತನ್ನೆದುರಿಗೆ ಸೌಮ್ಯವಾಗಿ ಮಲಗಿದ್ದ ಕಪಿಯನ್ನು ಕುರಿತು, “ ಅಯ್ಯಾ ! ಮಹಾಪುರುಷನೇ ! ನನ್ನ ಸರ್ವಾಪರಾಧವನ್ನು

ಮನ್ನಿಸು. ನೀನಾರು? ಯಕ್ಷನೇ, ದೇವತೆಯೋ! ಗಂಧರ್ವನೇ! ನಿನ್ನ ಮಹಿಮೆಯನ್ನು ಅರಿಯದೆ ನಿನ್ನನ್ನು ಮೂದಲಿಸಿ ಪಾಪಕಾರ್ಯವನ್ನೆಸಗಿದೆನು," ಎಂದು ವಿನೀತನಾಗಿ ನುಡಿದನು.

ಆಗ, ಆ ಕಪಿಯು ಭೀಮನೊಡನೆ, "ಅಯ್ಯಾ! ವೀರಾಗ್ರಣಿಯೇ, ನಾನೇ ಹನುಮಂತನು; ನಿನ್ನ ಅಗ್ರಜನಾದ ಆಂಜನೇಯನು. ಆತುರಬುದ್ಧಿಯುಳ್ಳವನಾಗಿ, ಈ ದೇವಮಾರ್ಗದಲ್ಲಿ ನೀನು ಸಂಚರಿಸಲು ಹೊರಟಿದ್ದೆ; ನಿನ್ನ ಅಭ್ಯುದಯದ ಚಿಂತೆಮಾಡಿ ನಿನ್ನ ಹಾದಿಯನ್ನಡ್ಡಗಟ್ಟಿ ಮಲಗಿದೆನು. ನೀನು ಪಾಂಚಾಲಿಗಾಗಿ 'ಸೌಗಂಧಿಕಾ' ಎಂಬ ದೇವಪುಷ್ಪಗಳನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಬಂದಿರುವೆಯೆಂಬುದು ನನಗೆ ತಿಳಿದಿದೆ. ಇದೋ! ನಿನ್ನ ಪಶ್ಚಿಮಕ್ಕಿರುವ ಮಾನಸ ಸರೋವರದ ಬಳಿಯಲ್ಲಿಯೇ ಸೌಗಂಧಿಕಾ ಪುಷ್ಪಗಳು ಬೆಳೆಯುತ್ತವೆ. ಅವುಗಳನ್ನು ಕೊಂಡೊಯ್ಯುವವನಾಗು," ಎಂದು ಹೇಳಿದನು.

ಇದನ್ನು ಕೇಳಿ ಭೀಮನು ಪುಳಕಿತನಾಗಿ, ಮಾರುತಿಯ ಚರಣಗಳಲ್ಲಿ ತನ್ನ ಮಸ್ತಕವನ್ನಿಟ್ಟು ನಮಸ್ಕಾರ ಮಾಡಿದನು. ಬಳಿಕ, ಹನುಮಂತನನ್ನು ಕುರಿತು, "ಅಯ್ಯಾ! ವೀರಶ್ರೇಷ್ಠನೇ, ಭಕ್ತಾಗ್ರಣಿಯೇ! ನಿನ್ನ ದರ್ಶನದಿಂದ ಪುನೀತನಾದೆನು; ಮಹಾನುಭಾವನೇ! ನೀನು ಸಮುದ್ರವನ್ನು ದಾಟಿ ಲಂಕೆಗೆ ಹೋಗುವಾಗ ತಳೆದ ಶರೀರಾಕೃತಿಯನ್ನು ನೋಡಬೇಕೆಂಬ ಅಪೇಕ್ಷೆಯಿದೆ. ನನ್ನ ಅಭಿಲಾಷೆಯನ್ನು ದಯೆಯಿಟ್ಟು ನಡೆಯಿಸುವವನಾಗು," ಎಂದು ಬಿನ್ನವಿಸಿಕೊಂಡನು. ಒಡನೆಯೇ ಪರ್ವತಾಕೃತಿಯನ್ನು ತಾಳಿದ ಆಂಜನೇಯನು ಭೂವ್ಯಾಕಾಶಗಳನ್ನು ಕೂಡಿಸಿ ಪ್ರಜ್ವಲಿಸುವ ಮಿಂಚಿನಂತೆ ಹೊಳೆದನು. ಆ ಹೊಳಪಿನಾಕೃತಿಯನ್ನು ನೋಡಲಾರದೆ, ಭೀಮನು ಕಣ್ಮುಚ್ಚಿ ಮತ್ತೊಮ್ಮೆ ಆತನ ಪಾದಗಳ ಮೇಲೆ ಮೈಯಿರಿಸಿದನು. ಕ್ಷಿಪ್ರದಲ್ಲಿಯೇ, ಸೌಮ್ಯಾಕೃತಿಯನ್ನು ಪಡೆದು, ತನ್ನ ಅನುಜನನ್ನು ಬಿಗಿದಪ್ಪಿ ಸಂತೈಸಿದನು.

ಹೀಗೆ, ಅಸಮಾನರೂ, ಅಪೂರ್ವ ಸಹೋದರರೂ ಆದ ಮಾರುತಿಯು ಭೀಮಸೇನನೂ ಒಂದುಗೂಡಿದರು. ಅಗ್ರಜನ ಆಲಿಂಗನೆಯಿಂದ ಭೀಮನಿಗೆ ನವಚೈತನ್ಯವು ತುಂಬಿ, ಅವನಿಗಿದ್ದ ಶಕ್ತಿಸಾಮರ್ಥ್ಯಗಳು ನೂರ್ಮಡಿ ಹೆಚ್ಚಿದವು. ಹನುಮಂತನು ಭೀಮನನ್ನು ಕುರಿತು "ಅಯ್ಯಾ! ನಿಮಗೆಲ್ಲರಿಗೂ

ಇನ್ನು ಶುಭವಾಗುವುದು. ನಿಮ್ಮ ದುರ್ದಿನಗಳು ಕಳೆದು ಕೌರವರ ನಾಶ ವಾಗುವುದು. ಮುಂಬಲಿರುವ ಕುರುಕ್ಷೇತ್ರದ ಮಹಾಯುದ್ಧದಲ್ಲಿ ರಣಭೂಮಿ ಯಲ್ಲಿ ನಿನ್ನ ಗರ್ಜನೆಯನ್ನು ಕೇಳಿದರೆ ಶತ್ರುಗಳು ತಲ್ಲಣಿಸುವಂತೆ ವರವನ್ನು ಕೊಟ್ಟಿರುವೆನು, ಹೋಗು. ನಿಮ್ಮ ರಥದ ಧ್ವಜದಲ್ಲಿ ನನ್ನ ಅಂಶವು ನೆಲಸಿ ರುವುದು. ಇದರಿಂದ ನೀವು ಜಯಶಾಲಿಗಳಾಗುವಿರಿ," ಎಂದು ಆಶೀರ್ವದಿಸಿ ಕಳುಹಿಸಿದನು. ಭೀಮನು ಹರ್ಷಚಿತ್ತದಿಂದ ಹೊರಟು ಮಾನಸ ಸರೋವರದ ಬಳಿಯಲ್ಲಿದ್ದ ಸೌಗಂಧಿಕಾ ಪುಷ್ಪಗಳನ್ನು ಸಂಗ್ರಹಿಸಿಕೊಂಡು ನಾರಾಯಣಾ ಶ್ರಮಕ್ಕೆ ಧಾವಿಸಿದನು.

## ಪ್ರಶ್ನೆಗಳು

೧. ಸೌಗಂಧಿಕಾ ಪುಷ್ಪಗಳನ್ನು ಸಂಗ್ರಹಿಸಿ ತರಲು ಭೀಮನು ಏಕೆ ಪ್ರಯತ್ನಿಸಿದನು ?

೨. ಆ ಪುಷ್ಪಗಳು ಎಲ್ಲಿ ದೊರೆಯುತ್ತಿದ್ದವು ?

೩. ಆ ಪುಷ್ಪಗಳನ್ನು ಸಂಗ್ರಹಿಸುವಾಗ ಉಂಟಾದ ಅಡಚಣೆಗಳೇನು?

೪. ಅಪೂರ್ವ ಸಹೋದರರು ಒಟ್ಟುಗೂಡಿದ ಬಗೆಯನ್ನು ವಿವರಿಸಿ.

# ಹುರಿಮಂಜಿ ಧ್ವಜ

ಔರಂಗಜೇಬನು ಸಿಂಹಾಸನವನ್ನು ಏರುವ ವೇಳೆಯಲ್ಲಿ ಭಾರತದಲ್ಲಿ ಮಹಾಕ್ರಾಂತಿಯುಂಟಾಗಿದ್ದಿತು. ಒಂದು ಕಡೆ ರಾಜಪುತ್ರರ ಕಿರುಕುಳ; ದಕ್ಷಿಣದಲ್ಲಿಯೋ ಮರಾಟಿಯವರ ಹಾವಳಿ, ಮಗದೊಂದು ಕಡೆ ಮುಸಲ್ಮಾನರ ದಂಗೆ, ಇವುಗಳನ್ನು ಎದುರಿಸುವುದರಲ್ಲಿಯೇ ಅವನ ಐವತ್ತು ವರ್ಷಗಳ ಆಡಳಿತವೆಲ್ಲ ಕಳೆದುಹೋಯಿತು. ಅದರಲ್ಲಿಯೂ, ಮರಾಟಿಯವರಲ್ಲಿ ಪ್ರಸಿದ್ಧನಾದ ಛತ್ರಪತಿ ಶಿವಾಜಿಯು ಔರಂಗಜೇಬನ ಸೊಕ್ಕನ್ನು ಬಹುಮಟ್ಟಿಗೆ ಮುರಿದು, ಭಾರತದ ಯೋಧರಲ್ಲಿ ಅಗ್ರಗಣ್ಯನೆನಿಸಿಕೊಂಡನು.

ಬಿಜಾಪುರದ ಸುಲ್ತಾನನ ಬಳಿಯಲ್ಲಿ ವೀರಯೋಧನಾಗಿದ್ದ ಷಾಜಿಯೇ ಶಿವಾಜಿಯ ತಂದೆ ಮತ್ತು ಲುಕ್ಜಿ ಜಾಧವರಾವ್ ಎಂಬ ಶ್ರೀಮಂತನ ಮಗಳಾದ ಜೀಜಾಬಾಯಿಯೇ ತಾಯಿ. ಷಾಜಿಯ ಜೀವನವೆಲ್ಲಾ ರಣರಂಗದಲ್ಲಿಯೇ ಕಳೆದುಹೋಗುತ್ತಿತ್ತು; ಆದ್ದರಿಂದ ಶಿವಾಜಿಯ ಬಾಲ್ಯವೆಲ್ಲಾ ಪುಣೆಯಲ್ಲಿ ತನ್ನ ವೀರಮಾತೆಯ ಬಳಿಯೇ ಕಳೆಯುತ್ತಿತ್ತು. ದಾದಾಜಿ ಕೊಂಡೇದೇವನೆಂಬುವನೇ ಈತನ ಗುರುವು. ವಿದ್ಯಾವಂತೆಯೂ, ಸುಸಂಸ್ಕೃತೆಯೂ ಆದ ಜೀಜಾಬಾಯಿಯು ಮಗನ ವಿದ್ಯಾಭ್ಯಾಸಕ್ಕೆ ನೆರವುನೀಡುತ್ತಿದ್ದುದಲ್ಲದೆ, ಭಾರತ, ರಾಮಾಯಣ ಮುಂತಾದ ಮಹಾಗ್ರಂಥಗಳನ್ನು ಶಿವಾಜಿಗೆ ಸಮೂಲಾಗ್ರವಾಗಿ ವಿವರಿಸುತ್ತಿದ್ದಳು. ಅಲ್ಲದೆ, ಪುರಾಣ ವ್ಯಕ್ತಿಗಳ ಮತ್ತು ಧೀರೋದಾತ್ತರ ಕಥೆಗಳನ್ನು ಪ್ರತಿದಿನವೂ ಹೇಳುತ್ತಿದ್ದಳು. ಇಂತಹ ವಾತಾವರಣದಲ್ಲಿ ಬೆಳೆದ ಶಿವಾಜಿಯು ಅಸಮಸಾಹಸಿಯೂ, ಉತ್ತಮ ರಾಜಕಾರಣಿಯೂ ಆಗಿ ಶೋಭಿಸಿದ್ದರಲ್ಲಿ ಏನೂ ಅತಿಶಯವಿಲ್ಲ. ಎಲ್ಲಕ್ಕೂ ಮೇಲಾಗಿ, ಗುರುಹಿರಿಯರಲ್ಲಿಯೂ ಭಕ್ತಿಯುಳ್ಳವನಾಗಿದ್ದನು. ಗೋ–ಬ್ರಾಹ್ಮಣರನ್ನು ದೇವರಂತೆ ಭಾವಿಸಿ, ಭಕ್ತಿಯಿಂದ ಸೇವಿಸುತ್ತಿದ್ದನು. ಸಾಧು ಸನ್ಯಾಸಿಗಳನ್ನು ಗೌರವಿಸಿ, ಅವರಿಗೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿ ಕೊಡುತ್ತಿದ್ದನು. ದಿನಕ್ಕೆರಡುಬಾರಿ, ಸ್ನಾನಾಹ್ನೀಕಗಳನ್ನು ಮಾಡಿ ಭವಾನಿ

ದೇವಿಯನ್ನು ತದೇಕಚಿತ್ತದಿಂದ ಪೂಜಿಸುತ್ತಿದ್ದನು. ಇವುಗಳಷ್ಟೇ ಅಲ್ಲದೆ, ಶಸ್ತ್ರಾಭ್ಯಾಸವನ್ನು ಮಾಡುತ್ತಲಿದ್ದು, ಕತ್ತಿ ವರಸೆಯಲ್ಲಿ ನಿಪುಣನಾಗಿದ್ದನು. ಶಿವಾಜಿಯು ಬಾಳಿದ್ದು ಕೇವಲ ಐವತ್ತಮೂರು ಸಂವತ್ಸರಗಳು ಮಾತ್ರ; ಆದರೆ ಅವನು ಬಾಳಿದ ಉದಾತ್ತ ಜೀವನವು ಚರಿತ್ರಾರ್ಹವಾಗಿಯೇ ಇತ್ತು.

ತರುಣನಾದ ಶಿವಾಜಿಯು ಒಂದು ಪುಟ್ಟ ಸೈನ್ಯವನ್ನು ಕಟ್ಟಿಕೊಂಡು ಅಲ್ಲಲ್ಲಿ ದುರ್ಗಗಳನ್ನು ಜಯಿಸಿದನು; ಅಲ್ಲದೆ ಸ್ವಂತವಾಗಿಯೂ ಕೆಲವು ಕೋಟೆಗಳನ್ನು ನಿರ್ಮಿಸಿಕೊಂಡನು. ಇದರಿಂದ ಉತ್ತೇಜಿತರಾದ ಬಹು ಮಂದಿ ಮರಾಟರು ಆ ಸೈನ್ಯಕ್ಕೆ ಸೇರಿದರು. ಆ ಬಳಿಕ ಶಿವಾಜಿಯು ಬಿಜಾಪುರವನ್ನು ಮುತ್ತಿದನು. ಈ ವೇಳೆಗಾಗಲೇ ಶಿವಾಜಿಯು ಬೆಟ್ಟದಿಲಿ ಯೆಂದು ಪ್ರಸಿದ್ಧನಾದನು.

ಬಿಜಾಪುರದ ಸುಲ್ತಾನನ ಪ್ರತಿನಿಧಿಯಾದ ಅಫಸಲ್‌ಖಾನನು ಶಿವಾಜಿ ಯನ್ನು ಕುತಂತ್ರದಿಂದ ಹಿಡಿಯಬೇಕೆಂದು ಬಂದು ತಾನೇ ವಧಿಸಲ್ಪಟ್ಟನು. ಮೊಗಲರ ಪ್ರತಿನಿಧಿಯಾದ ಷೈಸ್ತಾಖಾನನು ಶಿವಾಜಿಯನ್ನು ಆಕ್ರಮಣ ಮಾಡಬೇಕೆಂದು ಬಂದಾಗ, ಅವನಿಗೇ ಮಾನಭಂಗವನ್ನುಂಟುಮಾಡಿ, ಅವನ ಸೈನ್ಯವನ್ನು ನಿರ್ಮೂಲಗೊಳಿಸಿದನು. ಕಡೆಯದಾಗಿ ಕುತಂತ್ರಿಯು ಯಾವು ದಕ್ಕೂ ಹೇಸದ ಔರಂಗಜೇಬನ ಮೋಸದ ಬಲೆಗೆ ಬಿದ್ದು ಬಂದಿಯಾದರೂ ಬುದ್ಧಿಕೌಶಲದಿಂದ ತಪ್ಪಿಸಿಕೊಂಡು ತನ್ನ ರಾಜಧಾನಿಗೆ ಹೊರಟುಹೋಗಿ, ಕಡೆಗೂ ಮೊಗಲರಿಗೆ ಸೋಲದೆ ಸ್ವತಂತ್ರನಾಗಿದ್ದಲ್ಲದೆ ಪುಣೆಯಿಂದ ತಂಜಾ ವೂರಿನವರೆಗೂ ರಾಜ್ಯವನ್ನು ವಿಸ್ತರಿಸಿದನು.

ಶಿವಾಜಿಯು ಕಟ್ಟಿಸಿದ ಕೋಟೆಗಳಲ್ಲೆಲ್ಲಾ, ರಾಯಘರವು ಅತ್ಯಂತ ಭದ್ರವಾಗಿಯೂ ರಮ್ಯವಾಗಿಯೂ ಇದ್ದಿತು. ೧೬೭೪ ರಲ್ಲಿ, ಒಂದು ಶುಭ ಮುಹೂರ್ತದಲ್ಲಿ, ತಳಿರುತೋರಣ ಕಲಶಾದಿಗಳಿಂದಲಂಕೃತವಾದ ಕೋಟೆ ಯೊಳಕ್ಕೆ ಪ್ರವೇಶಮಾಡಿದನು. ಗುರು ದಾದಾಜಿಕೊಂಡೇದೇವನನ್ನೂ, ತನ್ನ ಮಾತೆ ಜೀಜಾಬಾಯಿಯನ್ನೂ ಮತ್ತಿತರ ಗೋ–ಬ್ರಾಹ್ಮಣರನ್ನೂ ಅರ್ಘ್ಯಪಾದ್ಯಗಳಿಂದ ಸತ್ಕರಿಸಿ, ಪೂಜೆಮಾಡಿ ಅವರ ಆಶೀರ್ವಾದ ಪಡೆದು, ಪಟ್ಟಾಭಿಷಕ್ತನಾದನು. ಪದವೀವೈಭವಗಳು ಶಿವಾಜಿಯನ್ನು ಅಧಃಪತನಕ್ಕೆ ಇಳಿಸಲಿಲ್ಲ. ಆಜೀವಪರ್ಯಂತವೂ ಆತನು ನೀತಿವಂತನಾಗಿಯೂ, ಕಾರ್ಯ

ತತ್ಪರನಾಗಿಯೂ, ದಯಾಳುವಾಗಿಯೂ ಮತ್ತು ಪರನಾರೀ ಸಹೋದರನಾಗಿಯೂ ಇದ್ದನು.

ಶಿವಾಜಿಯು ಪಟ್ಟಾಭಿಷಕ್ತನಾದ ಸಮಯದಲ್ಲಿ, ತಪಸ್ವಿಗಳೂ, ಮಹಾಜ್ಞಾನಿಗಳೂ ಆದ 'ಸ್ವಾಮಿ ರಾಮದಾಸರ'ರ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತ್ತು. ತೇಜಸ್ವಿಯಾದ ಆ ಸಂನ್ಯಾಸಿಯು ರಾಯಘರದ ಹೊರಗಿನ ತೋಪಿನಲ್ಲಿಯೇ ಆಶ್ರಮವನ್ನು ಸ್ಥಾಪಿಸಿಕೊಂಡು ತಪಸ್ಸನ್ನಾಚರಿಸುತ್ತಿದ್ದರು. ಸ್ವಾಮಿಗಳು ಅಪೇಕ್ಷಿಸಿದ್ದರೆ, ದರ್ಶನಾಕಾಂಕ್ಷಿಗಳಾಗಿ ಬರುತ್ತಿದ್ದ ಶಿಷ್ಯರು, ಅವರನ್ನು ಷೋಡಷೋಪಚಾರಗಳಿಂದ ತೃಪ್ತಿಪಡಿಸುತ್ತಿದ್ದರು. ಆದರೆ, ತ್ಯಾಗಿಯಾದ ರಾಮದಾಸರು ಯಾರಿಂದಲೂ ಏನನ್ನೂ ಅಪೇಕ್ಷಿಸದೆ, ಪ್ರತಿದಿನವೂ ಭಿಕ್ಷಾಪಾತ್ರೆಯನ್ನು ಪಿಡಿದು, ಗೃಹಸ್ಥರ ಮನೆಗಳಲ್ಲಿ ಯಾಚಿಸಿ ತನ್ನ ಜೀವನವನ್ನು ಸಾಗಿಸುತ್ತಿದ್ದರು. ಶಿವಾಜಿ ಮಹಾರಾಜನು ಆಗಾಗ ಸಂಚಾರ ಹೊರಟು, ಜನರ ಕಷ್ಟಕಾರ್ಪಣ್ಯಗಳನ್ನು ವಿಚಾರಿಸಿ ಅವುಗಳ ಪರಿಹಾರವನ್ನು ಮಾಡುತ್ತಿದ್ದನು. ಹೀಗೆ ರಾಜನು ಒಂದು ದಿನ ಸಂಚಾರ ಹೊರಟಾಗ, ಸ್ವಾಮಿಗಳು ಮನೆಮನೆಗೂ ಹೋಗಿ ಭಿಕ್ಷೆ ಬೇಡುತ್ತಿದ್ದರು. ಆ ಸಂನ್ಯಾಸಿಯ ತೇಜಸ್ಸು, ಗಾಂಭೀರ್ಯ ಮತ್ತು ವ್ಯಕ್ತಿತ್ವ ಇವುಗಳು ಶಿವಾಜಿಯನ್ನು ಮುಗ್ಧಗೊಳಿಸಿದುವು. ಒಡನೆಯೇ ಶಿವಾಜಿಯು ಅರಮನೆಗೆ ಧಾವಿಸಿ ಬಂದು ಒಂದು ಕಾಗದದ ಮೇಲೆ ಏನನ್ನೋ ಬರೆದು ಮಡಚಿ, ಒಬ್ಬ ಭಟನನ್ನು ಕರೆದು ಸ್ವಾಮಿಗಳು ಕೋಟೆಯ ಬಾಗಿಲಿಗೆ ಬಂದಕೂಡಲೆ ಮಡಚಿದ ಆ ಕಾಗದವನ್ನು ಸಂನ್ಯಾಸಿಯ ಭಿಕ್ಷಾಪಾತ್ರೆಯೊಳಕ್ಕೆ ಹಾಕುವಂತೆ ಆಜ್ಞಾಪಿಸಿದನು. ಭಟನು ರಾಜನ ಅಪ್ಪಣೆಯನ್ನು ಪಾಲಿಸಿದನು. ಸ್ವಾಮಿಗಳು ಅದನ್ನು ಬಿಚ್ಚಿ ಓದಲು ಶಿವಾಜಿಯು ತನ್ನ ಆಡಳಿತದಲ್ಲಿದ್ದ ರಾಜ್ಯ, ಕೋಶ ಮುಂತಾದುವುಗಳನ್ನೆಲ್ಲಾ ಸ್ವಾಮಿಗೆ ಒಪ್ಪಿಸಿಕೊಟ್ಟಂತೆ ದಾನಪತ್ರವಾಗಿತ್ತು. ಒಕ್ಕಣೆಯನ್ನು ತಿಳಿದ ಸ್ವಾಮಿಗಳು ಚಕಿತರಾಗಿ, ಅರಮನೆಯೊಳಕ್ಕೆ ಪ್ರವೇಶಿಸಿ, ಶಿವಾಜಿಯನ್ನು ಕುರಿತು, "ವತ್ಸಾ! ನಿನ್ನ ಸರ್ವಸ್ವವನ್ನೂ ನನಗೆ ದಾನವಾಗಿ ಒಪ್ಪಿಸಿ ನೀನೇನು ಮಾಡುವೆ?" ಎಂದರು. ಶಿವಾಜಿಯು ದೈನ್ಯತೆಯಿಂದ ಉತ್ತರಕೊಡುತ್ತಾ, "ಗುರುದೇವ! ನಾನು ನಿಮ್ಮ ಆಜ್ಞಾನುವರ್ತಿಯಾಗಿ, ಚರಣದಾಸನಾಗಿ ಸೇವೆ ಮಾಡುತ್ತೇನೆ;

ತಾವು ನನ್ನ ಕೈಬಿಡದೆ ಮಾರ್ಗದರ್ಶಕರಾಗಿದ್ದು ಕಾಪಾಡಬೇಕು," ಎಂದು ಬಿನ್ನಯಿಸಿಕೊಂಡನು. ಸುಪ್ರಸನ್ನರಾದ ರಾಮದಾಸರು ತಮ್ಮ ಕಾವಿಶಾಟಿಯನ್ನು ಕೊಟ್ಟು ಅದನ್ನು ಧ್ವಜವಾಗಿಟ್ಟುಕೊಂಡು ರಾಜ್ಯಪಾಲನೆಯನ್ನು ಮಾಡುವಂತೆ ವಿಧಿಸಿದರು. ಶಿವಾಜಿಯು ಗುರುವಿನಾಜ್ಞೆಯನ್ನು ಶಿರಸಾ ವಹಿಸಿ, ಗುರುಪ್ರಸಾದವಾದ ಹುರಿಮಂಜಿಧ್ವಜ (ಕಾವಿ ಬಣ್ಣದ ವಸ್ತ್ರ) ವನ್ನೇರಿಸಿ ರಾಜ್ಯವಾಳುತ್ತಿದ್ದನು. ಅಲ್ಲದೆ, ಆತನು ಆಳಿದ ಆರು ವರ್ಷಗಳ ಪರ್ಯಂತವೂ ಪ್ರತಿ ಒಂದು ರಾಜಕಾರಣದಲ್ಲೂ ರಾಮದಾಸರ ಸಲಹೆಯನ್ನು ಪಡೆಯುತ್ತ ಹೆಸರಾಂತ ರಾಜಕಾರಣಿಯೆಂದು ಪ್ರಖ್ಯಾತನಾದನು. ಈ ಆಡಳಿತದಲ್ಲಿ ಪ್ರಜೆಗಳು ಸುಖದಿಂದಿದ್ದರು. ಚಂದ್ರಗುಪ್ತನ ಅಭ್ಯುದಯಕ್ಕೆ ಚಾಣಕ್ಯರೂ, ಹುಕ್ಕ ಬುಕ್ಕರ ಏಳಿಗೆಗೆ ವಿದ್ಯಾರಣ್ಯರೂ ಕಾರಣರಾದಂತೆ ಸ್ವಾಮಿ ರಾಮದಾಸರು ಶಿವಾಜಿಯ ಗುರುದೇವರಾಗಿ, ಮಾರ್ಗದರ್ಶಕರಾಗಿ ಆತನ ಮೇಲ್ಮೆಗೆ ಕಾರಣರಾದರು. ೧೬೮೦ ರಲ್ಲಿ ಶಿವಾಜಿಯು ಮೃತಿಹೊಂದಿದ ನಂತರ, ರಾಮದಾಸರೂ ಕಣ್ಮರೆಯಾದರು.

ಮರಾಟರ ರಾಜ್ಯಧ್ವಜವಾಗಿ ಬಹಳಕಾಲ ಕಂಗೊಳಿಸಿದ ಹುರಿಮಂಜಿ ಧ್ವಜವು ಕ್ರೂರಿಯೂ ದರೋಡೆಕಾರನೂ ಆದ, ನಾದಿರ್‌ಷಹನು ಮರಾಟಿಯವರೊಡನೆ ಯುದ್ಧಮಾಡಿ ಜಯಪ್ರದನಾದಾಗ, ಆ ಧ್ವಜವನ್ನು ಕೈವಶ ಮಾಡಿಕೊಂಡನು. ಆ ಧ್ವಜದ ಪೂರ್ವಕಥೆಯನ್ನು ಕೇಳಿದ ನಾದಿರ್ ಷಹನು ತನ್ನ ಸ್ವದೇಶವಾದ ಪಾರ್ಸೀ ದೇಶಕ್ಕೆ ಒಯ್ದು ಅಲ್ಲಿನ ಮಸೀದಿಗೆ ಹೊದಿಸಿದ್ದನೆಂದೂ, ಅದು ಇನ್ನೂ ಅಲ್ಲಿಯೇ ಶಿಥಿಲವಾಗದಂತೆ ಇಡಲ್ಪಟ್ಟಿದೆಯೆಂದೂ ಪ್ರತೀತಿ ಇದೆ.

## ಪ್ರಶ್ನೆಗಳು

೧. ಶಿವಾಜಿಯ ಬಾಲ್ಯದ ವಿಷಯವಾಗಿ ನಾಲ್ಕು ವಾಕ್ಯಗಳನ್ನು ಬರೆಯಿರಿ.

೨. ಶಿವಾಜಿಯು ಚಾಕಚಕ್ಯತೆಯುಳ್ಳ ಸರದಾರನೂ, ಉತ್ತಮ ಯೋಧನೂ ಆಗಿದ್ದನೆಂಬ ವಿಷಯವನ್ನು ಸಮರ್ಥಿಸಿ.

೩. ಹುರಿಮಂಜಿಧ್ವಜವನ್ನು ಶಿವಾಜಿಯು ಪಡೆದ ಬಗೆಯನ್ನು ವಿವರಿಸಿ.

೪. ‘ಶಿವಾಜಿಯು ಮಹಾರಾಜನೆಂಬ ಪ್ರಶಸ್ತಿಗೆ ಅರ್ಹನು,’ ಹೇಗೆ ?

# ವಿಧಿಯ ಗೆಲುವು

ನಮ್ಮ ಪವಿತ್ರ ಭಾರತ ದೇಶದ ವೈಭವಗಳನ್ನು ಕೇಳಿ ಅದನ್ನು ನಾನಾ ವಿಧವಿರ್ಾಯರು ಆಕ್ರಮಣ ಮಾಡಿದ ವಿಷಯವು ಚರಿತ್ರೆಗಳಲ್ಲಿ ನಿರೂಪಿಸಲ್ಪಟ್ಟೀ ಇದೆ. ಹೀಗೆ ಬಂದ ಪರಕೀಯರಲ್ಲಿ ಆಪ್ಘನರ ಬುಡಕಟ್ಟಿಗೆ ಸೇರಿದ ಖಿಲ್ಜಿ ಮನೆತನದ ನಾಯಕರೂ ಒಂದು ಪಂಗಡದವರು. ಇವರಲ್ಲೆಲ್ಲಾ ಪ್ರಬಲನಾದವನು ಅಲ್ಲಾವುದೀನ್ ಖಿಲ್ಜಿಯೆಂಬುವನು. ಇವನು ಕುಟಿಲನೂ, ಕ್ರೂರಿಯೂ ಆಗಿದ್ದಷ್ಟೇ ಶೂರನೂ ಆಗಿದ್ದನು. ಈತನು ವಿಂಧ್ಯ ಪರ್ವತವನ್ನು ದಾಟಿ ಕಾಡುಗಳನ್ನು ಹಾದು ಹೊಯ್ಸಳ ರಾಜ್ಯದವರೆಗೂ ಆಡಳಿತವನ್ನು ಕಬಳಿಸಿಕೊಂಡನು. ರಾಜಪುತ್ರರ ರಾಜಧಾನಿಯಾದ ಚಿತ್ತೋರನ್ನೂ ವಶಪಡಿಸಿಕೊಂಡು ಕೈಸೆರೆಯಾದ ಭೀಮಸಿಂಹನನ್ನು ಕೊಂದನು. ಆಗ ಆತನ ರಾಣಿವಾಸದವರೆಲ್ಲರೂ ಅಗ್ನಿಪ್ರವೇಶ ಮಾಡಿದರು.

ಇಷ್ಟಾದರೂ, ಅಲ್ಲಾವುದೀನನಿಗೆ ವಶವಾಗದೆ ಸ್ವಾತಂತ್ರ್ಯಪ್ರಿಯರಾಗಿದ್ದವರಲ್ಲಿ ವಿಕ್ರಮಸಿಂಹನೂ ಮತ್ತು ಬಾಜ್ ಬಹದ್ದೂರನೆಂಬುವನೂ, ಇಬ್ಬರು. ವಿಕ್ರಮಸಿಂಹನು ಉದಯಪುರದ ಅರಸನು ಮತ್ತು ಬಾಜ್ ಬಹದ್ದೂರನು ಆ ಉದಯಪುರದ ನೆರೆಯಲ್ಲಿದ್ದ ನೂರುಷಿಲ್ಲಾ ಗ್ರಾಮದ ನಾಯಕನಾಗಿದ್ದನು. ವಿಕ್ರಮಸಿಂಹನ ಪತ್ನಿ ಶೋಭಾ ರಾಣಿಯು ರಾಠೋರ ಮನೆತನದವಳು. ಈಕೆಯು ಸುಶೀಲಳೂ, ಸುಂದರಿಯೂ ಆಗಿದ್ದು ಪತಿ ಹಿತೈಷಿಣಿಯಾಗಿದ್ದಳು. ಈ ದಂಪತಿಗಳ ಏಕಮಾತ್ರ ಪುತ್ರಿಯಾದ ನಿರುಪಮೆಯು ಅನುಪಮ ಸುಂದರಿಯಾಗಿದ್ದಳು. ಅಲ್ಲದೆ ಕಲಾವಿದೆಯಾಗಿಯೂ ದೃಢಸಂಕಲ್ಪವುಳ್ಳವಳಾಗಿಯೂ ಇದ್ದಳು. ಇವಳ ರೂಪು, ವಿದ್ಯೆ, ಕಲಾನೈಪುಣ್ಯತೆ ಇವುಗಳನ್ನು ಕೇಳಿದ ಅನೇಕ ರಾಜಕುಮಾರರು ಆಕೆಯ ಪಾಣಿಗ್ರಹಣ ಮಾಡಲು ಹಾತೊರೆಯುತ್ತಿದ್ದರು.

ಒಂದು ದಿನ ವಿಹಾರಾರ್ಥವಾಗಿ ಉದಯಪುರದ ರಾಣಿವಾಸದವರೆಲ್ಲಾ ನೂರುಷಿಲ್ಲಾ ಗ್ರಾಮದ ಹೊರಗಿದ್ದ ಉದ್ಯಾನವನಕ್ಕೆ ಹೋಗಿದ್ದರು. ಆ ವನವು ಸೊಬಗಿನಲ್ಲಿ ನಂದನವನವನ್ನು ಅಣಕಿಸುವಂತಿತ್ತು; ಪ್ರಕೃತಿಯ ಬೆಳಕು ಆಹ್ಲಾದದಾಯಕವಾಗಿತ್ತು. ಅಂದಿನ ಸಂಧ್ಯಾ ಸಮಯವು ಗಂಭೀರವಾಗಿತ್ತಲ್ಲದೆ, ನೀರವತೆಯಿಂದ ಶೋಭಿಸುತ್ತಿತ್ತು. ಅಲ್ಲಿಯೇ ಇದ್ದ ಒಂದು ಕಾರಂಜಿಯು ಸ್ಫಟಿಕಶಿಲೆಯ ಸೋಪಾನದ ಮೇಲೆ ಬಾಜ್ ಬಹದ್ದೂರನು ಸಿತಾರನ್ನು ಬಾರಿಸುತ್ತಾ ಅದರಿಂದ ಉತ್ಪನ್ನವಾದ ನಾದದಲ್ಲಿ ತಲ್ಲೀನನಾಗಿ ಮೈಮರೆತಿದ್ದನು. ಅವನ ದೃಷ್ಟಿ ಅದೆಷ್ಟೋ ಹೊತ್ತಿನವರೆಗೂ ಜಲರಾಶಿಯ ಮೇಲೆ ನಿಂತಿತ್ತು. ರಾಜಪುತ್ರಿ ನಿರುಪಮೆಯು ವಯೋಧರ್ಮಕ್ಕನುಸಾರವಾಗಿ ಸಖಿಯರೊಡನೆ ಕಲೆತು, ಕಣ್ಣಾಮುಚ್ಚಾಲಿಯಾಡುತ್ತಾ ಕಾರಂಜಿಯ ಬಳಿಗೆ ಓಡಿಬಂದಳು. ಅಲ್ಲಿ ಸಾರಿಬಂದ ಝೇಂಕಾರ ನಾದವನ್ನು ಕೇಳಿ ಅವಳ ಆಟದ ಮೇಲಿನ ಗಮನವು ಗತಿ ತಪ್ಪಿತು. ಸ್ವತಃ ಕಲಾವಿದೆ! ತನ್ನ ಸಮ್ಮುಖದಲ್ಲಿ ಸುಂದರನೂ, ಯುವಕನೂ ಆದ ಕಲಾವಿದನು ಗಾನಾಮೃತವನ್ನು ಹರಿಸಿ ಇತರರನ್ನು ಪುಳಕಿತರನ್ನಾಗಿ ಮಾಡಿ ತನ್ನಿರವನ್ನೇ ಮರೆತಿದ್ದಾನೆ! ತನ್ನ ಅರಿವಿಲ್ಲದಂತೆಯೇ ಆ ಕಲಾವಿದನ ಬಳಿಗೆ ನಡೆದು ಬಂದು ಅವನ ಸಮೀಪದಲ್ಲಿಯೇ ನಿಂತಳು. ಇದ್ದಕ್ಕಿದ್ದಂತೆಯೇ ಕಲಾವಿದನು ಕಣ್ತೆರೆದನು. ರೂಪರಾಶಿಯ ಬಿಂಬಾಕೃತಿಯನ್ನು ತನ್ನ ಮುಂದೆ ಕಂಡು ಅಪ್ರತಿಭನಾದನು. ನಾಲ್ಕು ನಯನಗಳೂ ಒಟ್ಟುಗೂಡಿದವು. ಆ ನಿಮಿಷದಲ್ಲಿಯೇ ಅವರೀರ್ವರೂ ಪರಸ್ಪರ ಒಲಿದರು. ಆ ಯುವಕ ಕಲಾವಿದನೇ ನೂರುಷಿಲ್ಲಾಪುರದ ನಾಯಕ ಬಾಜ್ ಬಹಾದ್ದೂರನು. ಇಷ್ಟರಲ್ಲಿ ರಾಜಪುತ್ರಿಯನ್ನು ಹುಡುಕುತ್ತ ಬಂದ ಸಖಿ ಮಾನಸಿಯು ಆಕೆಯನ್ನು ಎಚ್ಚರಿಸಿ ಕರೆದೊಯ್ದಳು. ನಿರುಪಮೆಯ ಪ್ರಶಾಂತವಾದ ಜೀವನ ಲಹರಿಗೆ ಅಣೆಕಟ್ಟು ಕಟ್ಟಿದಂತಾಯಿತು. ಅರಮನೆಗೆ ತೆರಳಿದ ನಂತರ ಆಕೆಯು ಅನ್ಯಮನಸ್ಕಳಾಗಿ ನಿದ್ರಾಹಾರಗಳನ್ನು ತೊರೆದಳು; ಅಲಂಕಾರ ವಸ್ತುಗಳಲ್ಲಿ ಅಭಿರುಚಿ ಇಲ್ಲವಾಯಿತು. ಹೀಗೆ ಕಂಗೆಡುತ್ತಿದ್ದ ರಾಜಪುತ್ರಿಯನ್ನು ನೋಡಿ, ಮಾನಸಿಯು ಬಹಳ ನೊಂದವಳಾಗಿ, ಸಖಿಯನ್ನು ಕುರಿತು, "ಸಖೀ! ನೀನು ಹೀಗೆ ಸದಾ ಕೊರಗುತ್ತಿದ್ದು ಕೃಶಳಾದರೆ, ಈ ನಿನ್ನ ಅವಸ್ಥೆಯು ರಾಣಿಯವರ ಗಮನಕ್ಕೆ ಬಂದು ಅನಾಹುತವಾಗ

ಲಿಕ್ಕಿಲ್ಲವೇ," ಎಂದು ಎಚ್ಚರಿಸಿದಳು. ಇದನ್ನು ಕೇಳಿ ಮತ್ತೂ ವಿಹ್ವಲಳಾದ ನಿರುಪಮೆಯು ದಿಕ್ಕು ಕಾಣದೆ ಅತ್ತಳು. ಇದನ್ನು ಕಂಡು ಮನಕರಗಿದವಳಾಗಿ ಮಾನಸಿಯು, ಆಕೆಯು ಧೈರ್ಯವನ್ನು ಹೊಂದಿ ಸಂತೋಷದಿಂದಿದ್ದರೆ, ಬಹಾದ್ದೂರನ ನೆಲೆಯನ್ನು ಕಂಡುಹಿಡಿಯುವುದಾಗಿ ವಚನವಿತ್ತಳು.

ತನ್ನ ಪ್ರೇಮವು ಒಬ್ಬ ವಿಧರ್ಮಿಯಲ್ಲಿ ನೆಟ್ಟಿದ್ದಕ್ಕಾಗಿ ನಿರುಪಮೆಗೆ ಸಖೇದಾಶ್ಚರ್ಯಗಳುಂಟಾದುವು. ಆದರೂ ಆ ಸತೀಮಣಿಯು ಅಚಲ ಮನಸ್ಸಿನವಳಾಗಿದ್ದಳು. ಈ ವಿಧವಾದ ಆಕಸ್ಮಿಕ ತಾರ್ಕಣೆಯು ವಿಧಿವಿಲಾಸ ವಲ್ಲದೆ, ಬೇರೆಯಿಲ್ಲವೆಂದು ಸಮಾಧಾನವನ್ನು ತಂದುಕೊಂಡಳು. ಆತನದಲ್ಲಿ ಮನಸ್ಸನ್ನು ಸಮರ್ಪಣೆ ಮಾಡಿ, ಅನ್ಯ ಪುರುಷನನ್ನು ವಿವಾಹವಾಗುವುದು ಮಹಾಪಾಪವೆಂದು ನಿರ್ಧರಿಸಿಕೊಂಡಳು.

ಆಗಿಂದಾಗ್ಗೆ ಮಾನಸಿಯ ಸಹಾಯದಿಂದ ತಮ್ಮ ಕುಶಲವಾರ್ತೆಯನ್ನು ನಿರುಪಮೆಯೂ ಮತ್ತು ಬಹಾದ್ದೂರನೂ ಪರಸ್ಪರ ತಿಳಿದುಕೊಂಡು ತೃಪ್ತ ರಾಗುತ್ತಿದ್ದರು. ಒಂದು ಸಂಜೆ ಮಾನಸಿಯ ಸಂಧಾನದ ಫಲವಾಗಿ, ಬಹಾದ್ದೂರನು ನಿರುಪಮೆಯ ಸಂದರ್ಶನಕ್ಕಾಗಿ ಅವಳ ಅರಮನೆಗೆ ಸೇರಿದ ಉದ್ಯಾನವನಕ್ಕೆ ಅಶ್ವಾರೋಹಿಯಾಗಿ ಬಂದನು. ರಾಜಕುಮಾರಿಯು ತನ್ನ ದುಃಖವನ್ನೆಲ್ಲಾ ಅವನ ಮುಂದೆ ತೋಡಿಕೊಂಡಳು. ಪ್ರೇಮಿಗಳೀರ್ವರೂ ಭಾವಪರವಶರಾಗಿ ಎಷ್ಟೋ ಹೊತ್ತಿನವರೆಗೂ ಮಾತನಾಡುತ್ತಿದ್ದರು. ಮಾನಸಿಯು ಅರೆಮನಸ್ಸಿನಿಂದ ಬಂದು ನಿರುಪಮೆಯನ್ನೆಚ್ಚರಿಸಿ ಅರಮನೆ ಯೊಳಕ್ಕೆ ಕರೆದೊಯ್ದಳು. ಬಹದ್ದೂರನು ಕುದುರೆಯ ಬೆನ್ನನ್ನು ಚಪ್ಪರಿಸಿ ತನ್ನ ಅರಮನೆಯ ಕಡೆಗೆ ಹೊರಟನು. ಅವನ ಬೆನ್ನು ತಿರುಗಿದ ವೇಳೆಗೆ ಸರಿಯಾಗಿ, ಅಂದು ಪ್ರಾತಃಕಾಲದಲ್ಲಿ ಬೇಟೆಗಾಗಿ ತೆರಳಿದ್ದ ವಿಕ್ರಮಸಿಂಹನು ಇದ್ದಕ್ಕಿದ್ದಂತೆಯೇ ಹಿಂತಿರುಗಿದನು. ತನ್ನ ಉದ್ಯಾನದಿಂದ ಒಬ್ಬ ವಿಧರ್ಮಿ ಯುವಕನ ನಿರ್ಗಮನವನ್ನು ಕಂಡು, ಕಿಡಿಕಿಡಿಯಾದನು. ತನ್ನಪ್ಪಣೆಯಿಲ್ಲದೆ ದಸ್ಯುವಂತೆ ಉದ್ಯಾನವನಕ್ಕೆ ಪ್ರವೇಶಿಸಿದ ಯುವಕನನ್ನು ಮೃತ್ಯುದೇವತೆಗೆ ಬಲಿ ಕೊಡಬೇಕೆಂಬ ಸಂಕಲ್ಪದಿಂದ ತನ್ನ ಕುದುರೆಯನ್ನು ನಾಗಾಲೋಟದಿಂದ ಓಡಿಸಿದನು. ಆದರೆ, ಅಷ್ಟರಲ್ಲಿ ತನ್ನ ಹಿಂದೆ ನಡೆದ ಸಂಘಟನೆಯ ಅರಿವಿಲ್ಲ

ದವನಾಗಿ, ಕೇವಲ ತನ್ನ ಪ್ರೇಯಸಿಯ ಚಿಂತೆಯಲ್ಲಿ ಮಾತ್ರ ತಲ್ಲೀನನಾಗಿ ಬಹಾದ್ದೂರನು ವಾಯುವೇಗದಿಂದ ಹೊರಟುಹೋದನು.

ವಿಕ್ರಮಸಿಂಹನು ಅರಮನೆಗೆ ಹಿಂತಿರುಗಿದನು. ಅಂತಃಪುರವನ್ನು ಹೊಕ್ಕು ಶೋಭಾರಾಣಿಯನ್ನು ಕುರಿತು, ತಾನಿಲ್ಲದ ವೇಳೆಯಲ್ಲಿ ಕಳ್ಳನಂತೆ ಉದ್ಯಾನವನಕ್ಕೆ ಬಂದಿದ್ದವನಾರೆಂದು ಗರ್ಜಿಸಿ ಕೇಳಿದನು. ಈ ವೇಳೆಗೆ ಇತರ ಸಖಿಯರಿಂದ ತನ್ನ ಮಗಳ ಪ್ರೇಮ ಕಥನವನ್ನು ಕೇಳಿ ತಿಳಿದಿದ್ದ ರಾಣಿಯು ತಲ್ಲಣಿಸುತ್ತಾ ತಲೆಬಾಗಿ ನಿಂತಳು. ರಾಣಿಯ ಮೌನವು ವಿಕ್ರಮಸಿಂಹನ ಸಂಶಯವನ್ನು ಮತ್ತೂ ಹೆಚ್ಚಿಸಿತು. ಒಡನೆಯೇ ಅಂತಃಪುರದ ದಾಸಿಯರನ್ನೂ ಮತ್ತು ನಿರುಪಮೆಯ ಸಖಿಯರನ್ನೂ ಬರಮಾಡಿಕೊಂಡು ಅವರನ್ನು ಮೂದಲಿಸಿ ನಡೆದಿರುವ ವಿಷಯವನ್ನೆಲ್ಲಾ ಕೂಲಂಕಷವಾಗಿ ತಿಳಿಸುವಂತೆ ಗರ್ಜಿಸಿದನು. ಎಲ್ಲರೂ ಭಯದಿಂದ ಕಂಪಿಸುತ್ತಾ ನಿಂತಿದ್ದರು. ರಾಜನು ಮತ್ತೂ ಆವೇಶದಿಂದ ರಾಣಿಯನ್ನು ಕುರಿತು, "ಶೋಭಾ! ಏಕೆ ಶಿಲಾ ಪ್ರತಿಮೆಯಂತೆ ನಿಂತಿರುವೆ? ಯಾರ ಒಲುಮೆಯನ್ನು ಅಪಹರಿಸಲು ಆ ವಿಧರ್ಮಿ ದಸ್ಯುವು ನನ್ನ ಉದ್ಯಾನವನವನ್ನು ಪ್ರವೇಶಿಸಿ ಅಪವಿತ್ರಗೊಳಿಸಿದನು? ಹೇಳಿರಿ! ಅವನು ಯಾರೇ ಆಗಲಿ ಅವನ ತಲೆಯನ್ನು ಚೆಂಡಾಡುವೆನು," ಎಂದು ಆರ್ಭಟಿಸಿದನು. ಒಡನೆಯೇ, ನಿರುಪಮೆಯು ಮಿಂಚಿನಂತೆ ಅಲ್ಲಿಗೆ ಪ್ರವೇಶಿಸಿದಳು. ಮತ್ತು ತಂದೆಯನ್ನುದ್ದೇಶಿಸಿ, "ಅಪ್ಪಾ! ಉದ್ಯಾನವನದಿಂದ ನಿರ್ಗಮಿಸುತ್ತಿದ್ದ ಯುವಕನು ಚೋರನೂ ಅಲ್ಲ, ಹೇಡಿಯೂ ಅಲ್ಲ. ಆತನು ಅನ್ಯಮತದವನಾದರೂ ನಿನ್ನಂತೆಯೇ ಸ್ವಾತಂತ್ರ್ಯಪ್ರಿಯನೂ ಧೀರನೂ ಆದ ಬಾಜ್ ಬಹದ್ದೂರನು. ಆತನು ನಮ್ಮ ನೆರೆಯಲ್ಲಿರುವ ನೂರು ಷಿಲ್ಲಾಪುರದ ನಾಯಕನು ನನ್ನ ಬೇಡಿಕೆಯಂತೆ, ಆತನು ಈ ದಿನ ಉದ್ಯಾನವನಕ್ಕೆ ಬಂದಿದ್ದನು. ವಿಧಿಯ ಪ್ರೇರಣೆಯಿಂದ ನಾನು ಅವನ ಸಂದರ್ಶನ ಪಡೆದು ಆತನಲ್ಲಿ ಅನು........," ಎಂದು ಗದ್ಗದಿತಳಾಗಿ ಅರ್ಧೋಕ್ತಿಯಲ್ಲಿಯೇ ನಿಲ್ಲಿಸಿದಳು.

ವಿಕ್ರಮಸಿಂಹನು ಮಗಳನ್ನು ಕುರಿತು, "ಎಲೌ! ಲಜ್ಜಾಹೀನಳೇ, ನೀನು ನನ್ನ ಏಕಮಾತ್ರ ಪುತ್ರಿಯಾಗಿ ನನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿದ್ದೆಯೆಂದು ತಿಳಿದಿದ್ದೆನಲ್ಲಾ? ಈಗ ನನ್ನ ಕುಲವನ್ನೇ ಘಾತಿಸುವೆಯಾ! ನಿನ್ನ

ಧರ್ಮವೆಲ್ಲಿ ಹೋಯಿತು? ವಿದ್ಯಾವಂತಳಾದ ನೀನು ಮತಿಶೂನ್ಯಳಾಗ ಬಹುದೇ? ಮೂರ್ಖಳೇ, ಬೇಗ ನೀನು ಬುದ್ಧಿಯನ್ನು ಸ್ವಾಧೀನಕ್ಕೆ ತೆಗೆದು ಕೊಳ್ಳುವವಳಾಗು. ನಿನ್ನ ಅವಿವೇಕದ ವರ್ತನೆಯಿಂದ ನನ್ನ ಹೃದಯವನ್ನು ಛೇದಿಸಬೇಡ," ಎಂದು ಗದರಿಸಿ ನುಡಿದನು. ಶೋಭಾರಾಣಿಯಾದಿಯಾಗಿ ಪ್ರತಿಯೊಬ್ಬರೂ ದುಃಖದ ಭಾರದಿಂದ ಬಾಗಿ ತತ್ತರಿಸಿ ಕಣ್ಣೀರಿಡುತ್ತಿದ್ದರು. ನಿರುಪಾಯಳಾದ ನಿರುಪಮೆಯ ಪರಿಸ್ಥಿತಿಯೂ ಚಿಂತಾಜನಕವಾಗಿದ್ದಿತು. ಪಿತೃವಿನ ಮನಸ್ಸನ್ನು ನೋಯಿಸಿ ಪಾಪಿಯಾಗಬೇಕೆಂಬ ಧರ್ಮಸಂಕಟ ಒಂದು ಕಡೆ, ಸತೀಧರ್ಮ ಮತ್ತೊಂದು ಕಡೆ. ಇವೆರಡರ ಮಧ್ಯೆ ಸಿಲುಕಿಕೊಳ್ಳಲು ತ್ತಿದ್ದರೂ ಅಧೋವದನೆಯಾಗಿ ತಂದೆಗೆ ಪ್ರತ್ಯುತ್ತರ ಕೊಟ್ಟಳು. ಆತನನ್ನು ದ್ದೇಶಿಸಿ, "ಅಪ್ಪಾ! ಇಲ್ಲಿ ನನ್ನ ಹಠಕ್ಕಿಂತಲೂ ವಿಧಿಯ ಕೈವಾಡವೇ ಅಧಿಕ ವಾಗಿದೆ. ನಾನು ನಿಮ್ಮ ಇಚ್ಛೆಗೆ ವಿರುದ್ಧವಾಗಿ ನಡೆದು ಕಳಂಕಿತೆಯಾಗು ತ್ತಿರುವೆನಾದರೂ, ನಾನು ನನ್ನ ಸ್ತ್ರೀ ಸಹಜವಾದ ಪಾತಿವ್ರತ್ಯ ಧರ್ಮವನ್ನು ಬಿಟ್ಟು ಭ್ರಷ್ಟೆಯಾಗಲಾರೆ! ನನ್ನನ್ನು ಮನ್ನಿಸಿ ಪವಿತ್ರ ಹಿಂದೂ ರಮಣಿಯು ಅವಳ ಜನ್ಮದಲ್ಲಿ ಒಂದು ಬಾರಿ ಮಾತ್ರ ಒಬ್ಬ ಪುರುಷನನ್ನು ವರಿಸಬಲ್ಲಳು. ತಾನು ಮನಃಪೂರ್ವಕವಾಗಿ ವರಿಸಿದ ಪುರುಷನಿಗೆ ವಂಚಿಸಿ, ಸಹೋದರರ ಸಮಾನರಾದ ಇತರರನ್ನು ಹೇಗೆ ಒಲಿದು ಕೈ ಹಿಡಿಯಬಲ್ಲಳು! ಈ ಧರ್ಮ ಸೂಕ್ಷ್ಮವನ್ನಲ್ಲವೇ, ನಮ್ಮ ವೇದಶಾಸ್ತ್ರ ಪುರಾಣ ಇತಿಹಾಸಗಳು ಸಾರುತ್ತಿರು ವುದು? ಸಾವಿತ್ರಿ, ದಮಯಂತಿ, ಚಂದ್ರಮತಿ ಮುಂತಾದ ಮಹಾ ಸತಿಯರು ಈ ತತ್ವವನ್ನಲ್ಲವೇ ಅವರು ಪರಿಪಾಲಿಸಿ ನಮಗೆ ಚಿರಸ್ಮರಣೀಯರಾಗಿರು ವುದು?" ಎಂದು ಬಿನ್ನಯಿಸಿಕೊಂಡಳು.

ಇದನ್ನೆಲ್ಲಾ ಕೇಳಿ ಕೋಪೋದ್ದೀಪಿತನಾದ ವಿಕ್ರಮಸಿಂಹನು ಈ ಪುತ್ರಿಯ ವಚನವನ್ನು ಕೇಳಿ ತಾಳ್ಮೆಗೆಟ್ಟವನಾಗಿ, "ಛೀ! ಅವಿವೇಕಿಯೇ! ನೀನು ಕುಲಗೋತ್ರದ ಅರಿವಿಲ್ಲದೆ ಒಮ್ಮೆ ಅಧಃಪಾತಾಳಕ್ಕೆ ಇಳಿದು, ಅಯೋಗ್ಯ ನಲ್ಲಿ ನಿನ್ನ ಆತ್ಮಸಮರ್ಪಣೆ ಮಾಡಿಕೊಂಡಿದ್ದಲ್ಲದೆ ನಿನಗೆ ಜನ್ಮವಿತ್ತ ಮಾತಾ ಪಿತೃಗಳಿಗೆ ಉಪದೇಶವನ್ನು ಕೊಡುವೆಯಾ! ನಿನಗೆ ಮೂರು ದಿನಗಳ ಅವಕಾಶವನ್ನು ಕೊಡುವೆನು. ಅಷ್ಟರೊಳಗೆ ನೀನು ಚಿತ್ತಸ್ವಾಸ್ಥ್ಯವನ್ನು ಪಡೆದು, ಆ ಮೂರ್ಖನನ್ನು ಮರೆತುಬಿಡು; ಮತ್ತು ರಾಜಪುತ್ರ ಕುಲ ಕಲಂಕಿನಿಯಾಗದೆ

ನನ್ನ ಮಾನ ಪ್ರಾಣಗಳನ್ನು ರಕ್ಷಿಸುವವಳಾಗು. ಇಲ್ಲವಾದಲ್ಲಿ ಆ ಬಾಜ್ ಬಹದ್ದೂರನ ತಲೆಯನ್ನು ಚೆಂಡಾಡಿ ನಿನ್ನ ಪದತಲದಲ್ಲಿ ಒಯ್ಯುವೆನು ಎಂಬು ದನ್ನು ಮರೆಯಬೇಡ," ಎಂದು ಘೀಗುಟ್ಟಿದನು. ಒಡನೆಯೇ ರಾಜಪುತ್ರಿಯು ಉತ್ತರ ಕೊಡುತ್ತಾ,"ಮೂರು ದಿನವೇಕೆ, ಮೂವತ್ತು ವರ್ಷಗಳಾದರೂ ನನ್ನ ಮನಸ್ಸು ಚಲಿಸದು. ನನ್ನ ಭಾವೀ ಪತಿಯ ಶಿರಸ್ಸನ್ನು ನೀವು ಉರುಳಿಸುವು ದಾದರೆ, ನಾನು ಸ್ವಲ್ಪವೂ ಹಿಂತೆಗೆಯದೆ, ನನ್ನ ಕುಲಧರ್ಮಕ್ಕನುಸಾರವಾಗಿ ಸಹಗಮನ ಮಾಡಿ, ಮರಣವನ್ನಪ್ಪುವೆನೇ ವಿನಃ, ನಾನೆಂದಿಗೂ ಧರ್ಮ ಬಾಹಿರಳಾಗೆನು," ಎಂದು ನಡಗುವ ಧ್ವನಿಯಲ್ಲಿ ಹೇಳಿ ದುಃಖದ ಹೊರೆ ಯನ್ನು ತಡೆಯಲಾರದೆ ಒಳಗೆ ನಡೆದಳು.

'ಇತ್ತ ಧರಿ, ಅತ್ತ ಪುಲಿ' ಎಂಬ ನಾಣ್ನುಡಿಯಂತೆ ಶೋಭಾರಾಣಿಯ ಪರಿಸ್ಥಿತಿಯೂ ಇಕ್ಕಟ್ಟಿನಲ್ಲಿತ್ತು. ಕ್ರೋಧದಿಂದ ಕಂಗೆಟ್ಟ ಮಹಾರುದ್ರನಿಗೆ ಸದೃಶನಾದ ಪತಿಯ ನಿಷ್ಠುರತೆ ಅತ್ತ; ಇತ್ತ ವೀರವ್ರತಾಚಾರಿಣಿಯೂ, ಅಚಲ ಮನಸ್ಸಿನವಳೂ ಆದ ತನುಜೆಯ ಸ್ಥಿರ ಸಂಕಲ್ಪ. ಯಾರಿಗೂ ಏನೂ ಹೇಳಲಾರದವಳಾಗಿ ತದೇಕಚಿತ್ತದಿಂದ ಪೂಜಾಲಯವನ್ನು ಹೊಕ್ಕಳು. ಆ ಮೂರು ದಿನಗಳ ಅವಧಿಯಲ್ಲಿ ಶೋಭಾರಾಣಿಯು ಮಗಳಿಗೆ ಹಿತೋಕ್ತಿಯನ್ನು ಹೇಳಿ ಅವಳ ಮನಸ್ಸನ್ನು ಬದಲಾಯಿಸುವಂತೆ ಪ್ರೇರೇಪಿಸಲು ಯತ್ನಿಸಿ ವಿಫಲ ಳಾದಳು. ಪ್ರಳಯ ರುದ್ರನಂತೆ ಕೋಪದಿಂದ ಉರಿಯುತ್ತಿದ್ದ ಪತಿಗೆ ಯಾವ ಮಾತನ್ನು ಹೇಳಲಾರದವಳಾಗಿ ತನ್ನಲ್ಲಿ ತಾನೇ ಕೊರಗುತ್ತಿದ್ದಳು. ಮಗ ಳಾದರೂ ಅಷ್ಟೇ ಹಠ ಪ್ರವೃತ್ತಿಯುಳ್ಳವಳಾಗಿದ್ದಳು. ತಾಯಿಯು ತನ್ನನ್ನು ಕುರಿತು ಒಂದೊಂದು ಮಾತಿಗೂ ಉತ್ತರವಾಗಿ, "ಅಮ್ಮಾ! ನೀನು ಉಚ್ಚ ರಜಪೂತ ಸ್ತ್ರೀಯೂ ಪತಿವ್ರತೆಯೂ ಆಗಿ, ನನ್ನನ್ನು ಧರ್ಮಚ್ಯುತಳಾಗೆಂದು ಹೇಗೆ ಬೋಧಿಸುವೆ? ನಾನು ಪ್ರಾಣವನ್ನಾದರೂ ಅರ್ಪಿಸಿ ಸ್ತ್ರೀ ಧರ್ಮವನ್ನು ಕಾಪಾಡಿಕೊಳ್ಳುವೆನೇ ವಿನಃ ನಾನೆಂದಿಗೂ ನನ್ನ ಸ್ವಾಮಿಗೆ ದ್ರೋಹಮಾಡ ಲಾರೆನು. ಆದರೆ, ನಿನ್ನಲ್ಲಿ ನನ್ನ ಭಿಕ್ಷೆಯೊಂದುಂಟು. ನೀನು, ನನ್ನ ಪೂಜ್ಯಪಿತನನ್ನು ಹೇಗಾದರೂ ಒಪ್ಪಿಸಿ, ನನ್ನ ಮನೋವಲ್ಲಭನ ಕೊಲೆ ಮಾಡದಂತೆ ಪ್ರೇರೇಪಿಸು. ಅದಕ್ಕೆ ಬದಲಾಗಿ ನನ್ನ ಪ್ರಾಣವನ್ನು ಅರ್ಪಿಸಲು ಸಿದ್ಧಳಾಗಿರುವೆನು," ಎಂದು ಹೇಳಿ ತನ್ನ ಮಾತೆಯ ಪಾದಗಳನ್ನು ಹಿಡಿದು

ತನ್ನ ಅಶ್ರುಧಾರೆಯಿಂದ ತೋಯಿಸುತ್ತಾ ಬೇಡಿಕೊಂಡಳು. ರಾಣಿಯು ಆ ಬಳಿಕ ತನ್ನ ಪತಿಯನ್ನು ಪ್ರಾರ್ಥಿಸಿಕೊಂಡು ಬಹದ್ದೂರನ ಪ್ರಾಣವನ್ನು ಳಿಸುವಂತೆ ಒಪ್ಪಿಸುವುದರಲ್ಲಿ ಜಯಶಾಲಿನಿಯಾದರೂ ಮಗಳ ವಿಷಯದಲ್ಲಿ ಮನಕರಗುವಂತೆ ಮಾಡಲು ಸಾಧ್ಯವಾಗಲಿಲ್ಲ.

ಇಂತಹ ಘರ್ಷಣೆಯಲ್ಲಿಯೇ ಮೂರು ದಿನಗಳು ಕಳೆಯುತ್ತಾ ಬಂದವು. ಮೂರನೆಯ ರಾತ್ರಿ ನಿರುಪಮೆಯ ವಿಚಾರಣೆಗಾಗಿ ವಿಶೇಷ ಸಭೆಯೊಂದನ್ನು ಏರ್ಪಡಿಸಲಾಗಿತ್ತು. ಅಪರಾಧಿ ಸ್ಥಾನದಲ್ಲಿ ಕುಮಾರಿಯು ಶಾಂತತೆಯಿಂದ ನಿಂತಿದ್ದಳು. ಅವಳ ಬದಿಯಲ್ಲಿ ತಾಯಿಯೂ, ಹಿಂದೆ ಸಖಿಯರೂ ನಿಂತಿದ್ದರು. ಸಭೆಯಲ್ಲಿ ನಿಶ್ಶಬ್ಧತೆಯು ತಾಂಡವಾಡುತ್ತಿತ್ತು. ವಿಕ್ರಮಸಿಂಹನು ಮಗಳನ್ನು ದ್ದೇಶಿಸಿ, "ಎಲೌ! ನಿರುಪಮೆ! ನಿನ್ನ ನಿರ್ಧಾರವೇನಾಯಿತು?" ಎಂದು ಘರ್ಜಿಸಿದನು. ಸಭೆಯು ತಲ್ಲಣಿಸಿತು. ಅಷ್ಟೇ ಸಂಯಮಿಯಾಗಿ ಆಕೆಯು, ತನ್ನ ನಿರ್ಧಾರದಲ್ಲಿ ಯಾವ ಮಾರ್ಪಾಡೂ ಉಂಟಾಗುವ ಸಂಭವವಿರದೆಂದೂ ಮತ್ತು ಆ ರುದ್ರನಾಟಕಕ್ಕೆ ತಾನು ಕಾರಣಳೇ ಹೊರತು, ನೂರುಷಿಲ್ಲಾ ನಾಯಕನು ಪೂರ್ಣ ನಿರ್ದೋಷಿಯಾದ್ದರಿಂದ, ಆತನು ವಧ್ಯಾರ್ಹನಲ್ಲವೆಂದೂ ಮುಕ್ತಕಂಠಳಾಗಿ ಹೇಳಿದಳು." ಒಂದೆರಡು ನಿಮಿಷಗಳು ನೀರವವಾಗಿ ಕಳೆದವು. ಆ ಬಳಿಯು ವಿಕ್ರಮಸಿಂಹನು ತನ್ನ ನಿರ್ಣಯವನ್ನು ಸೂಚಿಸುತ್ತಾ, "ನಿನ್ನ ಮನವಿಯಂತೆ ನನ್ನ ಶತೃವೂ ಕುಲಘಾತಕನೂ ಆದ ಬಹದ್ದೂರನ ಪ್ರಾಣದಾನ ಮಾಡಿರುವೆನು; ಅದಕ್ಕೆ ಪ್ರತಿಯಾಗಿ ನಿನ್ನ ಪ್ರಾಣವನ್ನು ತೆರಳುವವಳಾಗು. ನಾಳಿನ ಪ್ರಾತಃಕಾಲದಲ್ಲಿ ನಿನಗಾಗಿ ವಿಷವು ಸಿದ್ಧವಾಗಿರುವುದು. ಅದನ್ನು ನನ್ನ ಸಮ್ಮುಖದಲ್ಲಿ ಪಾನಮಾಡಿ ನನ್ನ ಧರ್ಮವನ್ನುದ್ಧರಿಸು," ಎಂದು ಹೇಳಿದನು. ಪುತ್ರಿಯ ಬಳಿಯಲ್ಲಿ ಅವಕುಂಠನವತಿಯಾಗಿ ನಿಂತಿದ್ದ ಶೋಭಾರಾಣಿಯು ಸ್ಮೃತಿತಪ್ಪಿ ಕೆಳಗುರುಳಿದಳು. ಆಕೆಯನ್ನೆತ್ತಿಕೊಂಡು ದಾಸಿಯರು ಅಂತಃ ಪುರದೊಳಕ್ಕೆ ನಡೆದರು.

ಸಭಿಕರು ತಲೆತಗ್ಗಿಸಿ ಉಸಿರುಕಟ್ಟಿಹೋದವರಂತೆ ಕುಳಿತರು. ರಾಜನೂ ಜಗ್ಗನೆದ್ದು ಒಳಕ್ಕೆ ಹೋದನು. ವಿಕ್ರಮಸಿಂಹನು ತನ್ನ ಪುತ್ರಿಯನ್ನು ಪ್ರೇಮಿಸುತ್ತಿರಲಿಲ್ಲವೆಂದಲ್ಲ. ಆತನು ಕರ್ತವ್ಯದೃಷ್ಟಿಯಿಂದಲೂ, ಧರ್ಮೋ

ದ್ಧರಣಕ್ಕಾಗಿ ಮನಸ್ಸನ್ನು ಕಲ್ಲುಮಾಡಿಕೊಂಡು ತನ್ನ ಪ್ರೇಮದ ಪುತ್ರಿಯನ್ನು ಸಾಮಾನ್ಯ ಪ್ರಜೆಯಂತೆ ವಿಚಾರಣೆಗೆ ಗುರಿಮಾಡಿ, ಮರಣದಂಡನೆಯನ್ನು ವಿಧಿಸಿದನು. ಒಟ್ಟಿನಲ್ಲಿ ಈ ಸಂಘಟನೆಯು, ನಮ್ಮ ಪುರಾಣದಲ್ಲಿ ನಿರೂಪಿಸಲ್ಪಟ್ಟಿರುವ ಪ್ರಹ್ಲಾದ ವೃತ್ತಾಂತವನ್ನು ನಮ್ಮ ನೆನಪಿಗೆ ತರುತ್ತದೆ.

ಅಂದಿನ ರಾತ್ರಿ ಶೋಭಾರಾಣಿಯು ನಿರ್ಣಯಿಸಿದ್ದು ಶೋಚನೀಯವಾಗಿದ್ದಿತು. ತನ್ನ ಪುತ್ರಿಯ ಸಂಕಲ್ಪವನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿದಳು. ಬಳಿಕ, ಮಾನಸಿಯೂ, ತಾಯಿ ಮಗಳೂ ಕಲೆತು ಕಾರ್ಯೋನ್ಮುಖರಾದರು. ಅರಮನೆಯಲ್ಲಿ ನಡೆದುದನ್ನೆಲ್ಲಾ ವಿವರಿಸಿ, ಒದಗಿರುವ ಗಂಡಾಂತರದಿಂದ ಪಾರುಮಾಡುವ ವಿಧವನ್ನೂ ಸೂಚಿಸಿ, ಒಂದು ಪತ್ರವನ್ನು ಬರೆದು ನಂಬುಗೆಗೆ ಅರ್ಹನಾದ ಒಬ್ಬ ಅಶ್ವಾರೋಹಿಯೊಡನೆ ಬಹದ್ದೂರನಿಗೆ ಕಳುಹಿಸಲಾಯಿತು. ಆತನು ಅಷ್ಟೇ ಉದ್ವಿಗ್ನನಾಗಿ ತನ್ನ ಪ್ರಿಯಳಾದ ನಿರುಪಮೆಯನ್ನುಳಿಸುವ ಸಂಕಲ್ಪವನ್ನು ಸೂಚಿಸಿ ಪ್ರತ್ಯುತ್ತರವನ್ನು ಕಳುಹಿಸಿದನು. ಮಗಳಿಗೆ ತನ್ನ ತೌರಿನಿಂದ ತಂದ ಆಭರಣಗಳನ್ನೆಲ್ಲಾ ತಾಯಿಯು ತೊಡಿಸಿ, ಅವಳನ್ನು ತಬ್ಬಿಕೊಂಡು ಅತ್ತು ತಾನೊಲಿದವನನ್ನು ವಿವಾಹವಾಗಿ ಮಹಾಸತಿಯಂತೆ ಬಾಳುವಂತೆ ಹರಸಿದಳು. ಏರ್ಪಾಡಿನಂತೆ ಎಲ್ಲವನ್ನೂ ಸಜ್ಜುಗೊಳಿಸಿಕೊಂಡು ಮಾತೆಗೆ ಮಣಿದು, ಸಖಿಯರನ್ನು ಬೀಳ್ಕೊಟ್ಟು ನಿರುಪಮೆಯು ರಾತ್ರಿ ಮೂರು ಘಂಟೆಯ ಸಮಯದಲ್ಲಿ ಅರಮನೆಯಿಂದ ಹೊರಟಳು. ಉದ್ಯಾನವನದ ಹೊ ರ ಗೆ ಅಶ್ವಾರೋಹಿಯಾಗಿ ಕಾದಿದ್ದ ಬಹದ್ದೂರನು ನಲ್ಲೆಯನ್ನು ಕುದುರೆಯಮೇಲೆ ಕೂಡಿಸಿಕೊಂಡು ಹೊರಟು ಹೋದನು.

ತರುವಾಯ ವಿಧಿಪೂರ್ವಕವಾಗಿ ಬಹದ್ದೂರನೂ ನಿರುಪಮೆಯೂ ವಿವಾಹವಾಗಿ ಆನಂದದಿಂದ ದಾಂಪತ್ಯಜೀವನವನ್ನು ಸಾಗಿಸುತ್ತಿದ್ದರು. ಪತೀಹಿತೈಷಿಣಿಯಾಗಿ ಪತಿವ್ರತೆಯಾಗಿ ನಿರುಪಮೆಯು ಜೀವನವನ್ನು ಹತ್ತು ವರ್ಷಗಳ ಕಾಲ ಕಳೆದಳು. ಈ ವೇಳೆಗೆ, ಈ ಕಥೆಯ ಆರಂಭದಲ್ಲಿ ಸೂಚಿಸಲ್ಪಟ್ಟಿರುವ ಅಲ್ಲಾವುದೀನನ ಲಾಲಸೆಯು ಮತ್ತೂ ಹೆಚ್ಚಿದ್ದಿತು. ಅಲ್ಲದೆ, ಅನುಪಮ ಸುಂದರಿಯಾದ ನಿರುಪಮೆಯ ವಿಷಯವೂ ಅವನ ಕಿವಿಗೆ ಬಿದ್ದಿತ್ತು. ಆಕೆಯನ್ನು ಪಡೆಯುವ ಲೋಭದಿಂದ, ಇದ್ದಕ್ಕಿದ್ದಂತೆಯೇ ಸೈನ್ಯಸಮೇತನಾಗಿ

ನೂರುಷಿಲ್ಲಾಪುರಕ್ಕೆ ಬಂದನು. ದುರ್ಗದ ಒಳಗಿದ್ದವರು ಈ ಅನಿರ್ವಚನೀಯ ಘಟನೆಯಿಂದ ಕಂಗೆಟ್ಟರು. ಕೆಚ್ಚೆದೆಯುಳ್ಳ ಬಹದ್ದೂರನು ಯುದ್ಧಕ್ಕೆ ಸಿದ್ಧನಾಗಿ ಪತ್ನಿಯಿಂದ ಬೀಳ್ಕೊಡಲ್ಪಟ್ಟು ಹೊರಟನು. ಅಲ್ಲಾವುದೀನನು ಆತನನ್ನು ಕುರಿತು, ನಿರುಪಮೆಯನ್ನೊಪ್ಪಿಸುವುದಾದರೆ ಆತನನ್ನು ಕ್ಷಮಿಸುವುದಾಗಿ ಹೇಳಿದನು. ಇದಕ್ಕೆ ಉತ್ತರವಾಗಿ ಬಹದ್ದೂರನು ಶತ್ರುವನ್ನು ಆಕ್ರಮಣ ಮಾಡಿದನು. ಇಬ್ಬರೂ ಸರಿಸಮನಾಗಿ ಕಾದಿದರು. ಆದರೆ, ಸುಸಜ್ಜಿತವಾದ ಸೈನ್ಯವಿಲ್ಲದ್ದರಿಂದ ಬಹದ್ದೂರನು ಮಡಿದನು. ಇದನ್ನೆಲ್ಲಾ ದುರ್ಗದ ಮೇಲಿನಿಂದಲೇ ನೋಡುತ್ತಿದ್ದ ನಿರುಪಮೆಯು ವಿಷಪಾನಮಾಡಿ ಶಯ್ಯೆಯಲ್ಲಿ ಮಲಗಿದ್ದಳು. ಅಲ್ಲಾವುದೀನನು ಅಂತಃಪುರಕ್ಕೆ ಬಂದು ಲೂಟಿ ಮಾಡಲು ಅವನಿಗೆ ದೊರೆತದ್ದು ನಿರುಪಮೆಯ ಮೃತಶರೀರ ಮಾತ್ರ. ಹಿಂದೂ ರಮಣಿಯರ ಚಿತ್ತಸ್ಥೈರ್ಯಕ್ಕೆ ತಲೆದೂಗುತ್ತಾ ಅಲ್ಲಾವುದೀನನು ಮತ್ತ್ಯಾವ ಹೆಂಗಸರ ಗೊಡವೆಗೂ ಹೋಗದೆ ಹಿಂತಿರುಗಿದನು.

ಹೀಗೆ, ವಿಧಿಯ ಪ್ರೇರಣೆಯಿಂದ ಒಂದು ಬಾರಿ ಸಾವಿನ ದವಡೆಯಿಂದ ಪಾರಾದ ನಿರುಪಮೆಯನ್ನು, ಅದೇ ವಿಧಿಯು ಎರಡನೆಯ ಬಾರಿ ಗೆದ್ದಿತು.

## ಪ್ರಶ್ನೆಗಳು

೧. ನಿರುಪಮೆಯು ಬಾಜ್‌ಬಹದ್ದೂರನನ್ನು ಕಂಡ ಬಗೆ ಹೇಗೆ?

೨. ವಿಕ್ರಮಸಿಂಹನು ಮಗಳ ವಿಚಾರಣೆಯನ್ನು ನಡೆಸಿದ ರೀತಿಯಲ್ಲಿ ನಿಮ್ಮ ಅಭಿಪ್ರಾಯವನ್ನು ತಿಳಿಸಿ.

೩. ವಿಕ್ರಮಸಿಂಹನ ಮುಖ್ಯ ಮೂರು ಗುಣಗಳನ್ನು ತಿಳಿಸಿ.

೪. ಶೋಭಾರಾಣಿಯು ಮಗಳನ್ನು ಮೃತ್ಯುಮುಖದಿಂದ ಪಾರು ಮಾಡಿದ ರೀತಿಯನ್ನು ವಿವರಿಸಿ.

೫. ' ವಿಧಿಯು ಮತ್ತೊಮ್ಮೆ ಗೆದ್ದಿತು,' ಹೇಗೆ?

೬. ನಿರುಪಮೆಯ ಗುಣಶೀಲಗಳ ವಿಷಯವಾಗಿ ಸಂಕ್ಷೇಪ ಟಿಪ್ಪಣಿಯನ್ನು ಬರೆಯಿರಿ.

# ಸೀತಾಪರಿತ್ಯಾಗ

ಶ್ರೀರಾಮಚಂದ್ರನು ಕೈಕೆಯ ಅಪೇಕ್ಷೆಯಂತೆ ಸೀತಾ ಲಕ್ಷ್ಮಣರ ಸಮೇತವಾಗಿ ಅರಣ್ಯಕ್ಕೆ ಹೋಗಿ ಹದಿನಾಲ್ಕು ವರ್ಷಗಳ ಕಾಲ ವನವಾಸ ವನ್ನು ಮುಗಿಸಿದನು. ತನ್ನ ಮುದ್ದು ಸತಿಯನ್ನು ಕದ್ದುಕೊಂಡು ಹೋದ ರಾವಣಾಸುರನನ್ನು ಸುಗ್ರೀವಾದಿಗಳ ಸಹಾಯದಿಂದ ಸಂಹರಿಸಿದನು. ಲಂಕೆಯ ಆಧಿಪತ್ಯವನ್ನು ವಿಭೀಷಣನಿಗೆ ಒಪ್ಪಿಸಿ ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ಹಿಂತಿರುಗಿ ಬಂದನು. ಒಂದು ಶುಭ ಮುಹೂರ್ತದಲ್ಲಿ, ವಸಿಷ್ಠರ ಅಪ್ಪಣೆಯಂತೆ ಅನುಜರೊಡಗೂಡಿ, ಪಟ್ಟಾಭಿಷಕ್ತನಾದನು.

ಸರ್ವ ಸಂಪತ್ತುಗಳಿಂದ ಸಮೃದ್ಧಿಯಾದ ಅಯೋಧ್ಯೆಯನ್ನು ಧರ್ಮ ನಿರತನಾಗಿಯೂ, ಪ್ರಜಾಹಿತೈಷಿಯಾಗಿಯೂ, ನೀತಿಶಾಸ್ತ್ರವನ್ನನುಸರಿ ಸಿಯೂ ಆಳುತ್ತಿದ್ದನು. ಹೀಗೆ ಬಹುಕಾಲ ಕಳೆದ ನಂತರ ಸೀತೆಯು ಗರ್ಭ ವತಿಯಾದಳು. ಚಂದ್ರಮುಖಿಯೂ, ಕೋಮಲಾಂಗಿಯೂ ಆದ ಜಾನಕಿಗೆ ವಸಿಷ್ಠರು ಪುಂಸವನಾದಿ ಕರ್ಮಗಳನ್ನು ನೆರವೇರಿಸಿದರು.

ಒಂದು ದಿನ ಶ್ರೀರಾಮನು ಸೀತೆಯ ಆಕಾಂಕ್ಷೆಯೇನಾದರೂ ಇದ್ದಲ್ಲಿ ತಿಳಿಸಿದಲ್ಲಿ ಅದನ್ನು ನೆರವೇರಿಸುವುದಾಗಿ ಹೇಳಿದನು. ಇದರಿಂದ ಸಂತೃಪ್ತ ಳಾದ ಆಕೆಯು, ಸಚ್ಚರಿತ್ರೆಯರೂ, ಸದಾಚಾರಸಂಪನ್ನೆಯರೂ ಮತ್ತು ಆಶ್ರಮವಾಸಿಗಳೂ ಆದ ಋಷಿಪತ್ನಿಯರ ಸತ್ಸಂಗದಲ್ಲಿ ಕೆಲಕಾಲ ಇರ ಬೇಕೆಂಬ ಬಯಕೆಯಿರುವುದಾಗಿ ತಿಳಿಸಿದಳು. ಈ ವಿಚಿತ್ರ ಆಕಾಂಕ್ಷೆಯನ್ನು ಕೇಳಿ ರಾಮಚಂದ್ರನು ನಕ್ಕನು; ಆದರೂ ಆ ಕೋರಿಕೆಯನ್ನು ಈಡೇರಿಸು ವುದಾಗಿ ವಚನಕೊಟ್ಟನು. ಹೀಗಿರಲು, ಒಂದು ರಾತ್ರಿ ರಾಮನು ತನ್ನ ಸ್ವಪ್ನದಲ್ಲಿ ತನ್ನ ಮನೋವಲ್ಲಭೆಯಾದ ಸೀತೆಯು ವನಾಂತರದಲ್ಲಿ ದಿಕ್ಕೆಟ್ಟು ಅಲೆಯುತ್ತಿದ್ದಂತೆ ಕಂಡು ಭ್ರಾಂತನಾದನು. ಈ ಸ್ವಪ್ನದಲ್ಲಿ ಕಂಡ ಪೀಡಾ ಪರಿಹಾರ್ಥವಾಗಿ ವಸಿಷ್ಠರು ಶಾಂತಿವ್ರತವನ್ನಾಚರಿಸಿದರು.

ಸದಾ ಪ್ರಜಾಭ್ಯುದಯದ ಚಿಂತೆಯಲ್ಲಿಯೇ ಇದ್ದ ರಾಮನು ಒಂದು ದಿನ ನಗರಶೋಧನನ್ನು ಏಕಾಂತದಲ್ಲಿ ಬರಮಾಡಿಕೊಂಡು ತನ್ನ ವಿಷಯದಲ್ಲಿ ಪ್ರಜೆಗಳಾಡಿಕೊಳ್ಳುತ್ತಿದ್ದ ವಿಶೇಷ ಸಂಗತಿಯನ್ನು ತಿಳಿಸಬೇಕೆಂದು ಒತ್ತಾಯ ಪಡಿಸಿದನು. ಆಗಿನ ಪದ್ಧತಿಯಂತೆ ಚಾರರು ಸಂಗತಿಯನ್ನು ಇದ್ದಂತೆಯೇ ತಿಳಿಸುತ್ತಿದ್ದರಲ್ಲದೆ ಮುಖಃಸ್ತುತಿಯನ್ನು ಮಾಡುತ್ತಿರಲಿಲ್ಲ. ಪ್ರಭುವಿಗೆ ಪ್ರತ್ಯುತ್ತರಕೊಡುತ್ತಾ, ಅಯೋಧ್ಯೆಯ ಸೊಬಗು ಸ್ವರ್ಗವನ್ನು ಜರೆಯುತ್ತಿರುವರೆಂದು ಸುಜನರು ಆಡಿಕೊಳ್ಳುತ್ತಿರುವರೆಂದು ತಿಳಿಸಿದನಲ್ಲದೆ ಕುತ್ಸಿತರು ಆಡುವ ವಾಕ್ಕುಗಳು ಯಾವ ಗಣನೆಗೂ ಬರತಕ್ಕದ್ದಲ್ಲವೆಂದು ಹೇಳಿದನು. ಶ್ರೀರಾಮನು ದೂತನ ವಾಕ್ಯದ ಉತ್ತರಾರ್ಧವನ್ನು ಕೇಳಿ ವ್ಯಾಕುಲಿತನಾಗಿ, ಆ ದೋಷಾರೋಪಣೆಯನ್ನು ಬಿಡಿಸಿ ಹೇಳುವಂತೆ ಆಜ್ಞೆಮಾಡಿದರು.

ಅಯೋಧ್ಯಾನಗರ ನಿವಾಸಿಯಾದ ಒಬ್ಬ ಮಡಿವಾಳಿಯ ಮಡದಿಯು ಪತಿಯೊಡನೆ ಜಗಳವಾಡಿ ಅವನಪ್ಪಣೆಯನ್ನು ಪಡೆಯದೆಯೇ ತವರುಮನೆಗೆ ಹೋದಳು. ಆಕೆಯ ಮಾತಾಪಿತೃಗಳು ಮಗಳನ್ನು ಕರೆತಂದು ಸ್ವೀಕರಿಸುವಂತೆ ಅಳಿಯನಿಗೆ ಹೇಳಿಕೊಂಡರು. ರೋಸಿದ್ದ ಅಗಸನು ಆಕೆಯನ್ನು ಸ್ವೀಕರಿಸಲು ಒಡಂಬಡಲಿಲ್ಲ; ಅಲ್ಲದೆ, ' ಓಡಿಹೋದ ಹೆಂಡತಿಯನ್ನು ಪುನಃ ತಂದಿಟ್ಟುಕೊಳ್ಳಲು ತಾನೇನು ರಾಮಚಂದ್ರನೇ ?' ಎಂದು ತನ್ನ ಮಾವನೊಡನೆ ಕೂಗಿ ಜಗಳವಾಡುತ್ತಿದ್ದನು. ಈ ಸಂಗತಿಯನ್ನು ಕೇಳಿದ್ದ ನಗರಶೋಧಕನು ರಘುಕುಲ ಲಲಾಮನೊಡನೆ ಅಂಜುತ್ತ ಅಂಜುತ್ತ ಹೇಳಿದನು. ಶೋಧಕನಿಗೆ ಅಪ್ಪಣೆಕೊಟ್ಟು ಕಳುಹಿಸಿ ರಾಮಚಂದ್ರನು ವ್ಯಸನಾಕ್ರಾಂತನಿಗೆ ನಿದ್ರೆಯನ್ನು ತೊರೆದು ಮೌನದಿಂದಿದ್ದನು.

ಪ್ರಾತಃಕಾಲದಲ್ಲಿ ಅಗ್ರಜನ ದರ್ಶನ ಪಡೆಯಲು ಲಕ್ಷ್ಮಣನು ಬಂದು ರಾಮನು ದುಃಖಿತನಾಗಿರುವುದನ್ನು ಕಂಡು ಆಶ್ಚರ್ಯಚಕಿತನಾದನು. ತನ್ನ ದುಃಖಕ್ಕೆ ಕಾರಣವನ್ನು ಹೇಳಿಕೊಂಡು ನಿಟ್ಟುಸಿರುಬಿಡುತ್ತಾ ಸೀತೆಯನ್ನು ವನವಾಸಕ್ಕೆ ಕಳುಹಿಸುವ ಆಲೋಚನೆಯುಳ್ಳವನಾಗಿರುವ ಸಂಗತಿಯನ್ನು ಹೇಳಿಕೊಂಡನು. ಚಕಿತನಾದ ಸೌಮಿತ್ರಿಯು, ಪರಿಶುದ್ಧಳೂ, ಸತ್ಯವ್ರತೆಯೂ ಆದ ಭೂಜಾತೆಯನ್ನು ವನಾಂತರಕ್ಕೆ ಕಳುಹಿಸುವುದು ಸಲ್ಲತಕ್ಕದ್ದೆಂದು ವಿನಂತಿ

ಮಾಡಿಕೊಂಡನು. ರಾಮನು ತಮ್ಮನಿಗೆ ರಾಜ್ಯಪಾಲನಾ ತಂತ್ರವನ್ನು ವಿವರಿಸಿ, ಪ್ರಜೆಗಳ ದೋಷಾರೋಪಣೆಗಳಿಗೆ ಅರಸನು ಕಿವಿಗೊಟ್ಟು ದೋಷ ಗಳನ್ನು ಪರಿಹರಿಸಿಕೊಳ್ಳದಿದ್ದಲ್ಲಿ ಅವನಿಗೆ ಸನ್ಮಾನವು ದೊರೆಯಲಾರದೆಂದು ಹೇಳಿದನು. ಅದೂ ಅಲ್ಲದೆ, ಬಹುಕಾಲ ಪರಪುರುಷನ ಆಶ್ರಯದಲ್ಲಿದ್ದ ಸೀತೆಯನ್ನು ಪತ್ನಿಯೆಂಬ ವ್ಯಾಮೋಹದಿಂದ ವೈಮರೆತವನಾಗಿ ಪರಿಗ್ರಹಿ ಸಿದ್ದು ತಪ್ಪಾಯಿತೆಂದು ಮಿಡುಕುತ್ತಾ ಹೇಳಿದನು. ಲಕ್ಷ್ಮಣನು ಸೀತಾ ಮಾತೆಯ ಪರವಾಗಿ ಎಷ್ಟು ವಾದಿಸಿದರೂ ನಿರರ್ಥಕವಾಯಿತು. ಮೇಲಾಗಿ, ಸೀತೆಯನ್ನು ಲಕ್ಷ್ಮಣನೇ ವನಾಂತರದಲ್ಲಿ ಬಿಟ್ಟುಬರತಕ್ಕದ್ದೆಂದು ವಿಧಿಸಿದನು ಮಾತೆಯ ಸ್ವರೂಪಳಾದ ಸೀತೆಗೆ ಎಂತಹ ವಿಪತ್ತು! ಅವಳ ಸ್ತ್ರೀ ಸಹಜ ವಾದ ಬಯಕೆಯು ಹೀಗೆ ಯಥಾರ್ಥವಾಗಬೇಕೆ? ಅವಳ ಚರಣದಾಸ ನಂತೆಯೂ, ಪ್ರಿಯಪುತ್ರನಂತೆಯೂ ಸೇವಿಸುತ್ತಿದ್ದ ಸೌಮಿತ್ರಿಗೆ ಸೀತೆಯನ್ನು ಕಾಡಿಗೆ ಅಟ್ಟುವ ಸೇವಾಭಾಗ್ಯವೇ? ವಿಧಿ!

ಋಷಿಪತ್ನಿಯರ ಸಮಾಗಮವನ್ನು ಅಪೇಕ್ಷಿಸಿದ ಅಭೀಷ್ಟವನ್ನು ತನ್ನ ಪತಿಯು ನೆರವೇರಿಸಿಕೊಡಲು ಒಪ್ಪಿದುದಕ್ಕಾಗಿ ಸಂತಸಗೊಂಡ ಸೀತೆಯು ಸಡಗರದಿಂದ ಪ್ರಯಾಣಕ್ಕೆ ಸಿದ್ಧಳಾಗಿ ಗುರುಹಿರಿಯರಿಗೆ ವಂದಿಸಿ ರಥಾರೂಢ ಳಾಗಿ ಹೊರಟಳು. ಅವಳ ಮುಗ್ಧ ಸಂಭ್ರಮವನ್ನು ಕಂಡು ಲಕ್ಷ್ಮಣನು ಮನಗುಂದಿ ಕಣ್ಣೀರುತುಂಬಿ ಮೌನದಿಂದಿದ್ದನು. ಸೀತೆಯು ಪ್ರಯಾಣ ಮಾಡುವಾಗ ನಿಸರ್ಗದ ಸೊಬಗನ್ನು ವಿವರಿಸಿ ತನ್ನ ಹಿಂದಿನ ವನವಾಸದ ಅನುಭವಗಳನ್ನು ಹೇಳುತ್ತಿದ್ದಳು. ಆದರೂ ಮರುಮಾತಾಡದೆ ದುಃಖ ಪೀಡಿತನಾಗಿದ್ದ ಮೈದುನನ ವರ್ತನೆಯನ್ನು ಕಂಡು ಶಂಕಿತಳಾದಳು. ತಮ್ಮ ರಥವು ಘೋರಾರಣ್ಯದೊಳಕ್ಕೆ ಹೊರಟದ್ದನ್ನು ಕಂಡು ಹೆದರಿ, ಅಲ್ಲಿ ಒಂದು ಪರ್ಣಶಾಲೆಯೂ ಕಾಣದಾದ ಮೈಥಿಲಿಯು, ಲಕ್ಷ್ಮಣನನ್ನು ಕುರಿತು ತಾವು ಹೋಗುತ್ತಿರುವುದೆಲ್ಲಿಗೆಂದು ಕೇಳಿದಳು. ಉತ್ತರವಿಲ್ಲ. ಗಂಗಾ ತೀರದಲ್ಲಿ ರಥದಿಂದ ಇಬ್ಬರೂ ಇಳಿದು, ಮುಂದು ಭೂಜಾತೆಯೊಡನೆ ನಾವೆಯನ್ನೇರಿ ಗಂಗೆಯನ್ನು ದಾಟಿ ಆ ದಡದಲ್ಲಿದ್ದ ಮತ್ತೊಂದು ಮಹಾಡವಿಯೊಳಕ್ಕೆ ಪ್ರವೇಶಿಸಿದರು. ನಂತರ, ನಿಧಾನವಾಗಿ ಬಿಕ್ಕುತ್ತಾ ಆಕೆಯ ಪರಿತ್ಯಾಗದ

ವಿಷಯದಲ್ಲಿ ರಾಮನಾಜ್ಞೆಯನ್ನು ತಿಳಿಸಿದನಲ್ಲದೆ ಅದಕ್ಕೆ ಕಾರಣವನ್ನು ಹೇಳಿದನು. ಕೇಳುತ್ತಿದ್ದಂತೆಯೇ ಸೀತೆಯು ಥರಥರನೆ ನಡುಗುತ್ತಾ ಮೂರ್ಛೆ ಹೊಂದಿದಳು. ಲಕ್ಷ್ಮಣನು ಆಕೆಯ ಕ್ಷೇಮವನ್ನು ಅಷ್ಟದಿಕ್ಪಾಲಕರಿಗೂ ವನದೇವತೆಗಳಿಗೂ ಸೂರ್ಯಚಂದ್ರರಿಗೂ ಒಪ್ಪಿಸಿ, ಆಕೆಗೆ ಅರಿವು ಬಂದ ಬಳಿಕ ಕೇಳುವ ಪ್ರಶ್ನೆಗಳಿಗೆ ಉತ್ತರಿಸಲು ಆಗದವನಾಗಿ ಮೋಸಪಡಿಸಿ ಆಕೆಯನ್ನು ತಂದು ನಟ್ಟಡವಿಯ ಪಾಲು ಮಾಡಿದ್ದಕ್ಕಾಗಿ ಹೇಸಿ ಮುಖ ಮರೆಯಿಸಿಕೊಂಡು ಹೊರಟು ಬಂದುಬಿಟ್ಟನು.

ಮೂರ್ಛೆ ತಿಳಿದೆದ್ದ ಸೀತೆಯ ದುಃಖವನ್ನು ವರ್ಣಿಸುವುದು ಸಾಧ್ಯವೆ! ಅಡಿಗಡಿಗೆ ರಾಮಚರಣ ಸ್ಮರಣೆಯನ್ನು ಮಾಡುತ್ತಾ ತನ್ನಾವ ಅಪರಾಧಕ್ಕೆ ಆ ಶಿಕ್ಷೆಯನ್ನು ರಾಘವನು ಕೊಟ್ಟನೋ ಎಂದು ಕನಲುತ್ತಿದ್ದಳು. ಪವಿತ್ರತೆಯಾದ ಸೀತೆಯು ಈ ಅನಿಷ್ಟವೆಲ್ಲವೂ ತಾನು ಹೆಣ್ಣಾಗುಟ್ಟಿದ್ದರ ಫಲವೆಂದು ಕಂಬನಿಯನ್ನು ಮಿಡಿದಳು. ಮತ್ತು ಅಲ್ಲಿದ್ದ ವನವೃಕ್ಷಗಳಿಗೂ, ತರುಲತೆಗಳಿಗೂ, ಮೃಗಪಕ್ಷಿಗಳಿಗೂ ದುಃಖವನ್ನು ತೋಡಿಕೊಂಡು ಅತ್ತಳು. ಅವುಗಳು ಆಕೆಯೊಡನೆ ಸಹಕರಿಸಿ ರೋಧಿಸುತ್ತಿದ್ದುವೋ ಎಂಬಂತೆ ಆ ಕಾನನದಲ್ಲಿ ಗಭೀರತೆಯು ಆವರಿಸಿತ್ತು. ಪ್ರಾಣಹತ್ಯವನ್ನು ಮಾಡಿಕೊಂಡು ದುಃಖವನ್ನು ನೀಗಿಕೊಳ್ಳಲು ಗರ್ಭದ ಹೊರೆ. ವಿಧಿಯಿಲ್ಲದವಳಾಗಿ ಚೇತರಿಸಿಕೊಂಡು ಮುಳ್ಳು ಕಲ್ಲುಗಳಿಂದ ನಿಬಿಡವಾದ ಮಾರ್ಗದಲ್ಲಿ ಚಿಗುರಿನಂತಿದ್ದ ತನ್ನ ಕಾಲುಗಳನ್ನೂರಿ ನೊಂದು ಹೊರಟಳು.

ಆ ವೇಳೆಗೆ ಸರಿಯಾಗಿ ಶಿಷ್ಯರಿಂದೊಡಗೂಡಿ ಬಂದ ವಾಲ್ಮೀಕಿ ಋಷಿಗಳು ಗದ್ಗದಿತಳಾಗಿಯೂ ಏಕಾಂಗಿಯಾಗಿಯೂ ದುಃಖಿಸುತ್ತಿದ್ದ ಸೀತೆಯನ್ನು ಕಂಡು, ಆಕೆಯನ್ನು ಸಂತೈಸಿ ತನ್ನ ಪರಿಚಯವನ್ನು ತಿಳಿಸಿ, ವಿಷಯವನ್ನೆಲ್ಲಾ ತಿಳಿದುಕೊಂಡನು. ಮುನಿಯು ಆಕೆಯನ್ನು ಮಗಳಂತೆ ಪರಿಗ್ರಹಿಸಿ ತನ್ನ ಆಶ್ರಮದಲ್ಲಿ ಆಶ್ರಯಕೊಟ್ಟನು.

## ಪ್ರಶ್ನೆಗಳು

೧. ‘ ರಾಮನ ಕನಸು ನನಸಾಯಿತು,’ ಹೇಗೆ ?

೨. ಸೀತೆಯ ಕೋರಿಕೆಯ ದುಃಖಾಂತವನ್ನು ಕಂಡ ಸಂಗತಿಯನ್ನು ಬರೆಯಿರಿ.

೩. ಸೀತಾಪರಿತ್ಯಾಗವು ಆಧುನಿಕ ಸಮಾಜ ಜೀವನದ ಗುರಿಯಿಂದ ತೃಪ್ತಿಯೇ, ಚರ್ಚಿಸಿ.

೪. ಸೀತೆಯ ದುಃಖವನ್ನು ವರ್ಣಿಸಿ.

# ಮುನಿದ ಮಾರಿ

ಕುರುಕ್ಷೇತ್ರ ಯುದ್ಧದ ನಂತರ ಯುಧಿಷ್ಠಿರ ಮಹಾರಾಜನು ರಾಜ್ಯ ವನ್ನು ನಹುಷ, ಬಲಿ, ಶಿಬಿ ಮತ್ತು ಮಾಂಧಾತ ಮುಂತಾದ ರಾಜಋಷಿ ಗಳಂತೆ ಪಾಲನೆ ಮಾಡುತ್ತಿದ್ದನು. ಆದರೂ ಸಹ, ಗುರುಹಿರಿಯರ ಮತ್ತು ಸಹೋದರರ ವಧೆಯಿಂದ ಖಿನ್ನನಾಗಿದ್ದನು. ಆಗ ಗುರುಗಳಾಗಿದ್ದ ವೇದವ್ಯಾಸ ರನ್ನು ಕರೆಯಿಸಿ, ತನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ತಿಳಿಸಬೇಕೆಂದು ಕೇಳಿ ಕೊಂಡನು. ಆ ಮಹರ್ಷಿಗಳು ಧರ್ಮೋಪದೇಶ ಮಾಡುತ್ತಾ, ಶ್ರೀ ರಾಮಚಂದ್ರನು ನಿರ್ವಹಿಸಿದ ಅಶ್ವಮೇಧ ಯಾಗವನ್ನು ಮಾಡುವಂತೆ ಬೋಧಿಸಿ, ಅದನ್ನು ಆಚರಿಸುವ ರೀತಿಯನ್ನು ತಿಳಿಸಿದನು.

ವ್ಯಾಸರ ಸಲಹೆಯಂತೆ, ಯಾಗಕ್ಕೆ ಅರ್ಹವಾದ ಕುದುರೆಯನ್ನು ಭದ್ರಾವತಿಯ ಅರಸನಾದ ಯೌವನಾಶ್ವನನ್ನು ಭೀಮಸೇನನೂ, ವೃಷಧ್ವಜನೂ ಸೋಲಿಸಿ, ಅಶ್ವವನ್ನು ತಂದರು. ಯಜ್ಞಕ್ಕಾಗಿ ಧರ್ಮರಾಯನು ದೀಕ್ಷೆಯನ್ನು ವಹಿಸಿ, ಅಸಿಪತ್ರವ್ರತವನ್ನು ಕೈಗೊಂಡನು. ಚೈತ್ರ ಹುಣ್ಣಿಮೆಯ ದಿನ, ಯಜ್ಞಾಶ್ವವು ದಿಗ್ವಿಜಯಕ್ಕಾಗಿ ಕಳುಹಿಸಲ್ಪಟ್ಟಿತ್ತು.

ಆ ಕಾಲದಲ್ಲಿ ಮಾಹಿಷ್ಮತೀಪುರವನ್ನು (ನರ್ಮದಾ ನದಿಯ ತೀರ ದಲ್ಲಿತ್ತು). ನೀಲಧ್ವಜನೆಂಬ ಅರಸು ಆಳುತ್ತಿದ್ದನು. ಜ್ವಾಲೆಯೆಂಬುವಳು ಆತನ ಪಟ್ಟದರಸಿಯಾಗಿದ್ದಳು. ಇವರಿಗೆ ಪ್ರವೀರನೆಂಬ ವೀರಪುತ್ರನೂ, ರೂಪಗುಣ ಸಂಪನ್ನೆಯಾದ 'ಸ್ವಾಹಾ' ಎಂಬ ಕುವರಿಯು ಜನಿಸಿದರು. ಯೌವನಸ್ಥೆಯಾದ ಮಗಳಿಗೆ ತ್ರಿಲೋಕಗಳಲ್ಲಿನ ಮಹಾಪುರುಷರ ಭಾವಚಿತ್ರ ಗಳನ್ನು ತರಿಸಿದರೂ ಒಬ್ಬನನ್ನೂ ಆಕೆಯು ಮೆಚ್ಚದೆ, ತೇಜಸ್ವಿಯೂ, ಸ್ವಯಂ ಪ್ರಕಾಶನೂ ಆದ ವೀತಿಹೋತ್ರನನ್ನು ವರಿಸುವ ಇಚ್ಛೆಯುಳ್ಳವಳಾಗಿರುವ ಳೆಂದು ತಿಳಿಸಿದಳು. ಇವಳ ಸಂಕಲ್ಪವನ್ನು ತಿಳಿದ ನೀಲಧ್ವಜನು ಚಿಂತೆ ಗೀಡಾದನು. ಆತನನ್ನು ಸಂತೈಸಿ ಸ್ವಾಹಾದೇವಿಯು ನರ್ಮದಾ ನದಿಯ ತೀರದಲ್ಲಿ ಉಗ್ರತಪಸ್ಸನ್ನು ಆಚರಿಸಿ, ಅಗ್ನಿಯನ್ನು ಮೆಚ್ಚಿಸಿ ಮದುವೆ

ಯಾದಳು. ನವದಂಪತಿಗಳು ವಿವಿಧ ಭೋಗಗಳನ್ನನುಭವಿಸುತ್ತಾ ಅರಮನೆಯಲ್ಲಿ ಸುಖದಿಂದಿದ್ದರು.

ಪಾಂಡವರ ಅಶ್ವವು ಮಾಹಿಷ್ಮತೀಪುರಕ್ಕೆ ಬಂದಿತು. ಕೆಚ್ಚೆದೆಯ ಪ್ರವೀರನು ಅದನ್ನು ಕಟ್ಟಿಹಾಕಿದನು. ಅರ್ಜುನನು ರಣಕಲಿಗಳಾದ ತಂದೆ ಮಕ್ಕಳೊಡನೆ ಬಹಳ ಕಾದಾಡಬೇಕಾಯಿತು. ಆದರೂ, ನೀಲಧ್ವಜನ ಕೈಯೇ ಮೇಲಾಗಿತ್ತು. ಆಗ ಅರ್ಜುನನು ಅಗ್ನಿಯನ್ನು ಪ್ರಾರ್ಥಿಸಿ ಹಿಂದೆ ಅಗ್ನಿಯು ವ್ಯಾಧಿಪೀಡಿತನಾಗಿದ್ದಾಗ ಖಾಂಡವವನ ದಹನ ಮಾಡಿ ಮೂಲಿಕೆಗಳನ್ನು ಕೊಡಿಸಿದ ಸಂಗತಿಯನ್ನು ನೆನಪುಮಾಡಿಕೊಟ್ಟನು. ಆಗ ವೀತಿಹೋತ್ರನು ಮಾವನನ್ನು ಒಡಂಬಡಿಸಿ ಕುದುರೆಯನ್ನು ಕೊಡಿಸಿ, ಎರಡು ಪಂಗಡದವರಲ್ಲಿ ಮೈತ್ರತ್ವವನ್ನುಂಟು ಮಾಡಿಸಿದನು.

ಜ್ವಾಲೆಯಾದರೊ ಹಟಮಾರಿ ! ಅರ್ಜುನನಲ್ಲಿ ಆಕೆಗೆ ಏಕೋ ದ್ವೇಷ. ಆದ್ದರಿಂದ ಗಂಡನನ್ನು ಕೆರಳಿಸಿ ಪತಿಪುತ್ರರು ಮತ್ತೊಮ್ಮೆ ಅರ್ಜುನನ ಮೇಲೆ ಯುದ್ಧಮಾಡುವಂತೆ ಪ್ರೇರೇಪಿಸಿದಳು. ಆದರೆ, ಆ ಬಾರಿ ಪ್ರವೀರನು ಮಡಿದನು. ಪುತ್ರಶೋಕದಿಂದ ಕಂಗೆಟ್ಟ ನೀಲಧ್ವಜನು ತನ್ನ ಪುತ್ರನ ಮರಣಕ್ಕೆ ಜ್ವಾಲೆಯೇ ಕಾರಣಳೆಂದು ಅವಳನ್ನು ಬೈದು ಪುನಃ, ಆ ಅಶ್ವವನ್ನು ಅರ್ಜುನನಿಗೆ ಒಪ್ಪಿಸಿದನು. ಇಷ್ಟಾದರೂ ಹಟವನ್ನು ಬಿಡದೆ, ಜ್ವಾಲೆಯು, ತನ್ನ ಸೋದರಳಿಯ ಉನ್ಮುಖನನ್ನು ಹುರಿದುಂಬಿಸಿ ಪಾರ್ಥನ ಮೇಲೆ ಯುದ್ಧಕ್ಕೆ ಕಳುಹಿಸಬೇಕೆಂದು ಪ್ರಯತ್ನಪಟ್ಟಳು. ಆದರೆ, ಅವಳ ಮಾತಿಗೆ ಉನ್ಮುಖನು ಬೆಲೆ ಕೊಡಲಿಲ್ಲ ; ಕೃಷ್ಣನ ಮಿತ್ರರೂ, ಸಜ್ಜನರೂ ಆದ ಪಾಂಡವರಲ್ಲಿ ಹಗೆತನ ಬಯಸಿದುದಕ್ಕಾಗಿ ಆಕೆಯನ್ನು ಬೈದು ಓಡಿಸಿದನು.

ಮುನಿದ ಮಾರಿಯು ಅಲ್ಲಿಂದ ಹೊರಟು, ಪುಣ್ಯವಾಹಿನಿಯಾದ ಗಂಗಾನದಿಯ ತೀರಕ್ಕೆ ಬಂದು ತಪಸ್ಸನ್ನಾಚರಿಸಿದಳು. ಆಕೆಗೆ ಗಂಗೆಯು ಪ್ರತ್ಯಕ್ಷಳಾಗಿ ಬೇಡಿದ ವರವನ್ನು ಕೊಡುವುದಾಗಿ ವಚನ ಕೊಟ್ಟಳು. ಪ್ರವೀರನ ಮರಣಕ್ಕೆ ಕಾರಣನಾದ ಅರ್ಜುನನಿಗೆ ಅವನ ಮಗನಿಂದಲೇ ಮರಣವುಂಟಾಗುವಂತೆ ವರವನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡಳು. ಇಂತಹ ವಿಚಿತ್ರ ವರವನ್ನು ಬೇಡಿದ ಜ್ವಾಲೆಯ ಮಾತಿನಿಂದ, ಪಾಪನಾಶಿನಿಯು ಅಪ್ರತಿಭಳಾದಳು. ಅವಳ

ಸಂದೇಹ ಪ್ರವೃತ್ತಿಯನ್ನು ಅರ್ಥಮಾಡಿಕೊಂಡವಳಾಗಿ, ಪ್ರತ್ಯುತ್ಪನ್ನಮತಿಯಾದ ಜ್ವಾಲೆಯು, ಗಂಗೆಯ ಪ್ರೇಮದ ಪುತ್ರನೂ, ಮಹಾವೀರನೂ, ತ್ಯಾಗಿಯೂ ಆದ ಭೀಷ್ಮನನ್ನು ಅರ್ಜುನನು ತಂತ್ರದಿಂದ ಕೊಂದ ಸಂಗತಿಯನ್ನು ಜ್ಞಾಪಿಸಿ ಕೊಟ್ಟಳು. ಪುತ್ರಶೋಕವನ್ನು ನೆನೆದು ವೈಮರೆತ ಗಂಗೆಯು, ಅರ್ಜುನನು ತನ್ನ ಪುತ್ರನಿಂದ ವಧಿಸಲ್ಪಡಲೆಂದು ಶಾಪವನ್ನು ಕೊಟ್ಟಳು. ಆಕೆಗೆ ಮಣಿದು ಜ್ವಾಲೆಯು, ಅಲ್ಲಿಂದ ಹೊರಟು ತನ್ನ ಪತಿಯ ಮನೆಗೆ ಹೋಗಲಿಚ್ಛೆ ಇಲ್ಲದವಳಾದಳು. ಆದ್ದರಿಂದ ಅಗ್ನಿಪ್ರವೇಶಮಾಡಿ ಒಂದು ಬಾಣದಾಕಾರವನ್ನು ಹೊಂದಿ ಬಭ್ರುವಾಹನನ ಬಳಿ ಸೇರಿಕೊಂಡಳು.

ಮಾಹಿಷ್ಮತೀಪುರದಿಂದ ಹೊರಟ ಅಶ್ವವು ಸೌಭರಿ ಮುನಿಯ ಆಶ್ರಮವನ್ನು ಹಾದು ಚಂಪಕಾವತಿಗೆ ಪ್ರವೇಶಿಸಿತು. ಅರ್ಜುನನು ಆ ಅರಸರನ್ನೆಲ್ಲಾ ಗೆದ್ದು ಸ್ತ್ರೀರಾಜ್ಯವಾದ ಪ್ರಮೀಳೆಯ ಪಟ್ಟಣಕ್ಕೂ ಹೊರಟನು. ಅಲ್ಲಿ ಕೇಳಿದ ಅಶರೀರವಾಣಿಯಂತೆ ಪ್ರಮೀಳೆಯನ್ನು ವಿವಾಹಿತನಾಗಿ, ಅಲ್ಲಿಂದ ಅನೇಕ ದೇಶಗಳನ್ನು ದಾಟಿ ಮಣಿಪುರಕ್ಕೆ ಹೊರಟನು. ಹಿಂದೆ ಒಂದು ಕಾಲದಲ್ಲಿ ಅರ್ಜುನನು ಚಿತ್ರಾಂಗದೆಯೆಂಬ ಅರಸುಕುವರಿಯನ್ನು ಮದುವೆಯಾಗಿದ್ದನು. ಇವರೀರ್ವರಿಗೆ ಅಸಮಸಾಹಸಿಯೂ, ಸದ್ಗುಣಿಯೂ ಆದ ಒಬ್ಬ ಕುವರನು ಜನಿಸಿದನು. ಇವನೇ ಬಭ್ರುವಾಹನನು ; ಅಭಿಮನ್ಯುವಿಗೆ ಸಮನಾದ ಯೋಧನು ಮಣಿಪುರಕ್ಕೆ ಬಂದ ಯಜ್ಞಾಶ್ವವನ್ನು ಬಭ್ರುವಾಹನನು ಕಟ್ಟಿಹಾಕಿ, ಯುದ್ಧಕ್ಕೆ ಸನ್ನದ್ಧನಾಗಿ ಮಾತೆಯ ಆಶೀರ್ವಾದವನ್ನು ಪಡೆಯಲು ಬಂದನು. ಈ ಸುದ್ದಿಯನ್ನು ಕೇಳಿದ ಚಿತ್ರಾಂಗದೆಯು,"ಮಗೂ ! ಅರ್ಜುನನೇ ನಿನ್ನ ತಂದೆ, ನೀನು ವೀರನಾದರೂ ತಂದೆಯೊಡನೆ ಯುದ್ಧವನ್ನು ಮಾಡುವುದು ಸೂಕ್ತವಲ್ಲ ; ನೀನು ಒಡನೆಯೇ ಹೋಗಿ ಆತನನ್ನು ಅಭಿವಂದಿಸಿ ನಿನ್ನ ಸರ್ವಸ್ವವನ್ನೂ ಒಪ್ಪಿಸಿ, ನನ್ನ ಮನಸ್ಸನ್ನು ತೃಪ್ತಿಗೊಳಿಸು," ಎಂದು ಆಜ್ಞಾಪಿಸಿದಳು. ಮಾತೆಯ ಆಜ್ಞೆಯನ್ನು ಶಿರಸಾವಹಿಸಿ ಬಭ್ರುವಾಹನನು ಕಪ್ಪಕಾಣಿಕೆಗಳೊಡನೆ ಅರ್ಜುನನ ಮರೆಹೊಕ್ಕನು. ವಿಧಿವಿಲಾಸ ! ಚಿತ್ರಾಂಗದೆಯಿಂದ ತನಗೆ ಒಬ್ಬ ಪುತ್ರನು ಸಂಭವಿಸಿದನೆಂಬ ಸಂಗತಿಯನ್ನು ಮರೆತ ಅರ್ಜುನನು, ಮಗನ ವಿನಯವನ್ನು ಅರ್ಥಮಾಡಿಕೊಳ್ಳಲಿಲ್ಲ. ಇದಕ್ಕೆ ಪ್ರತಿ

ಯಾಗಿ, ಮಗನನ್ನು ಕೆಣಕಿ ಮಾತನಾಡಿ ಆತನು ಹೇಡಿಯೆಂದೂ, ಕ್ಷತ್ರಿಯ ಪುತ್ರನಲ್ಲವೆಂದೂ ಜರೆದನಲ್ಲದೆ, ವೇಶ್ಯೆಯ ಪುತ್ರನಾಗಿದ್ದರೂ ಇರಬಹುದೆಂದು ಮೂದಲಿಸಿದನು. ಇದರಿಂದ ಕೆರಳಿದ ಬಭ್ರುವಾಹನನು ತಾಯಿಯ ಅಪ್ಪಣೆ ಯನ್ನು ಮರೆತು, ಅರ್ಜುನನನ್ನು ಆಕ್ರಮಣ ಮಾಡಿದರು

ತಂದೆ ಮಕ್ಕಳ ಯುದ್ಧವು ದೇವಾಸುರ ಯುದ್ಧಕ್ಕಿಂತಲೂ ಭಯಂಕರ ವಾಗಿದ್ದಿತು. ತ್ರೇತಾಯುಗದಲ್ಲಿ ನಡೆದ ರಾಮ ಕುಶಲವರ ಯುದ್ಧದಂತೆ ತೋರುತ್ತಿತ್ತು. ಉಗ್ರ ಸ್ವರೂಪವನ್ನು ತಾಳಿದ ಬಭ್ರುವಾಹನ ಅರ್ಜುನರ ಯುದ್ಧದಲ್ಲಿ ಅರ್ಜುನನ ಸೈನ್ಯವು ಕಂಗೆಟ್ಟಿತು. ಚಿರವಿರಹಿಣಿಯೂ, ಪತಿವ್ರತಾ ಶಿರೋಮಣಿಯೂ ಆದ ಚಿತ್ರಾಂಗದೆಯನ್ನು ನಿಂದಿಸಿದ ಪಾಪ, ಗಂಗೆಯ ಶಾಪ, ಜ್ವಾಲೆಯ ಮುನಿಸು ಇವುಗಳ ಪರಿಣಾಮದಿಂದ ಅರ್ಜುನನು ನಿತ್ರಾಣ ನಾದನು. ಬಭ್ರುವಾಹನನಲ್ಲಿ ಸೇಡನ್ನು ತೀರಿಸಿಕೊಳ್ಳಲು ಸೇರಿದ್ದ ಜ್ವಾಲೆಯ ಅಂಶದ ಬಾಣಪ್ರಯೋಗ ಮಾಡಲು ಕಾರ್ತಿಕ ಏಕಾದಶಿಯ ದಿನ ಅರ್ಜುನನು ಹತನಾದನು. ಜಯಶಾಲಿಯಾದ ಚಿತ್ರಾಂಗದ ಕುವರನು ಉತ್ಸಾಹದಿಂದ ಬೊಬ್ಬಿರಿಯಲು, ಶಂಕಿತಳಾದ ಅವನ ತಾಯಿಯು ಧಾವಿಸಿ ಬಂದು, ಪತಿಯ ಮೃತದೇಹವನ್ನು ಕಂಡು, ಗೋಳಾಡಿದಳು. ಆ ವೇಳೆಗೆ ಅರ್ಜುನನು ಮಣಿ ಪುರಕ್ಕೆ ಬಂದ ವಿಷಯವನ್ನು ಕೇಳಿದ್ದ ಉಲೂಪಿಯೆಂಬ ಪಾರ್ಥನ ಇನ್ನೊಬ್ಬ ಮಡದಿಯೂ ತನ್ನ ಪತಿಯ ಸಂದರ್ಶನಾರ್ಥಿಯಾಗಿ ಅಲ್ಲಿಗೆ ಬಂದಳು. ಅಲ್ಲಿನ ದುರಂತವನ್ನು ಕಂಡು ದುಃಖದಲ್ಲಿ ಭಾಗಿಯಾದಳು. ಬಭ್ರುವಾಹನನ ಪ್ರಾರ್ಥನೆಯಂತೆ ಕೃಷ್ಣನೂ, ಕುಂತಿ, ಭೀಮ, ನಕುಲರೂ ಅಲ್ಲಿಗೆ ಬಂದು ಖಿನ್ನರಾದರು. ಹೀಗೆ ಮಣಿಪುರವು ದುಃಖದ ಸಾಗರವಾಯಿತು.

ನಾಗಕನ್ನಿಕೆಯಾದ ಉಲೂಪಿಯ ಸಲಹೆಯಂತೆ ಬಭ್ರುವಾಹನನು ಸರ್ಪಲೋಕಕ್ಕೆ ಹೋಗಿ ಆದಿಶೇಷನಿಗೆ ವಿವಿಧ ಸಂಗತಿಗಳನ್ನು ತಿಳಿಸಿ ಸಂಜೀವಕ ಮಣಿಯನ್ನು ಬೇಡಿದನು. ಆದಿಶೇಷನು ಆ ಮಣಿಯೊಡನೆ ಹೊರಟು ವಾಸುದೇವನ ಅಪ್ಪಣೆಯನ್ನು ಪಡೆದು, ಅರ್ಜುನ, ವೃಷಧ್ವಜ ಮುಂತಾದವ ರನ್ನೆಲ್ಲಾ ಬದುಕಿಸಿದನು. ಆಗ ಸಂತೋಷವು ಎಲ್ಲೆಲ್ಲೂ ಹರಡಿತು. ಬಭ್ರು ವಾಹನನು ಎಲ್ಲರನ್ನೂ ಅರಮನೆಗೆ ಸ್ವಾಗತಿಸಿ, ಸಮಸ್ತ ಐಶ್ವರ್ಯಗಳನ್ನೂ, ರಾಜ್ಯವನ್ನೂ ಕೃಷ್ಣಾರ್ಜುನರಿಗೆ ಒಪ್ಪಿಸಿದನು. ಕೃಷ್ಣನು ಎಲ್ಲರನ್ನೂ ಸಮಾ

ಧಾನಪಡಿಸಿ, ಅರ್ಜುನ ಬಭ್ರುವಾಹನರ ಕಾಳಗವು ಮುನಿದ ಜ್ವಾಲೆಯ ಸೇಡಿನ ಮತ್ತು ಗಂಗೆಯ ಶಾಪದ ಫಲವೆಂದು," ವರ್ಣಿಸಿದನು.

ಹೀಗೆ ಕ್ಷಮೆಯಲ್ಲಿ ಧರಿತ್ರಿ ಸಮಾನಳೂ ದಯಾಮಯಿಯೂ ಆದ ನಾರಿಯು ಮುನಿದರೆ ಮಾರಿಯಾಗಬಲ್ಲಳು.

## ಪ್ರಶ್ನೆಗಳು

೧. ಧರ್ಮರಾಯನು ಅಶ್ವಮೇಧ ಯಾಗವನ್ನು ಮಾಡಲು ಏಕೆ ಸಂಕಲ್ಪಿಸಿದನು ?

೨. ಅಶ್ವಮೇಧ ಯಾಗದ ಸ್ವರೂಪವೇನು ?

೩. ಜ್ವಾಲೆಯು ಗಂಗೆಯಿಂದ ಶಾಪವನ್ನು ಹೇಗೆ ಕೊಡಿಸಿದಳು ? ವಿವರಿಸಿ.

೪. ಬಭ್ರುವಾಹನನೂ ಅರ್ಜುನನೂ ಮಾಡಿದ ಯುದ್ಧ ಮತ್ತು ಅದರ ಪರಿಣಾಮವನ್ನು ವಿವರಿಸಿ.

೫. ಅರ್ಜುನನನ್ನು ಮರಳಿ ಬದುಕಿಸಿದ್ದು ಹೇಗೆ ?

# ಅತಿಥಿ ಸತ್ಕಾರ

ಬಹುಕಾಲದ ಹಿಂದೆ ಬೆಳ್ಳರಹಳ್ಳಿ (ಪ್ಯಾಲಸ್ಟೈನ ಬಳಿ) ಯಲ್ಲಿ, ಒಂದು ಕುಟೀರದಲ್ಲಿ ಮುತ್ತು ಎಂಬ ಮೋಚಿಯುವನು ವಾಸಿಸುತ್ತಿದ್ದನು. ಇವನಿಗೆ ಮುನ್ನೂ ಎಂಬ ಪತ್ನಿಯೂ ಒಂಭತ್ತು ವರ್ಷದ ದುರ್ಗಾ ಎಂಬ ಬಾಲಕಿಯೂ ಇದ್ದರು. ಮುತ್ತುವು ಮೆದುಸ್ವಭಾವದವನೂ, ದಯಾಳುವೂ ಆಗಿದ್ದನು. ಹಗಲಿರಳೂ ಅವಿಶ್ರಾಂತನಾಗಿ ದುಡಿದರೂ ಇವರ ಹೊಟ್ಟೆ ಬಟ್ಟೆಗೆ ಸಾಕಾಗು ವಷ್ಟೂ ಅನೇಕ ವೇಳೆ ಲಭಿಸುತ್ತಿರಲಿಲ್ಲ. ಇದರಿಂದ, ಇವರ ಗೃಹಸ್ಥ ಜೀವನವು ಬಹಳ ಹೀನಸ್ಥಿತಿಯಲ್ಲಿದ್ದಿತು. ಇದಕ್ಕೆ ಬಹುಮಟ್ಟಿಗೆ, ಮುತ್ತುವು ತನ್ನ ಗಿರಾಕಿಗಳಿಂದ ಹಣವನ್ನು ನಿಷ್ಠುರತೆಯಿಂದ ವಸೂಲಿಮಾಡದಿರುವುದು. ಅವರು ಕೊಟ್ಟಾಗ, ಕೊಟ್ಟಷ್ಟನ್ನು ತೆಗೆದುಕೊಂಡು ಸುಮ್ಮನಾಗುತ್ತಿದ್ದನು. ಆದರೆ, ಮುನ್ನುವಿನ ಜೀವನದ ಧ್ಯೇಯ ಬೇರೆ ಮಟ್ಟದಲ್ಲಿದ್ದಿತು. ಆಕೆಯು ಇತರ ಹೆಂಗಸರಂತೆ ಸುಖದಿಂದ ಬಾಳುವೆಯನ್ನು ನಡೆಸಬೇಕೆಂಬ ಆಶೆ ಯುಳ್ಳವಳಾಗಿದ್ದಳು. ಇದರಿಂದ ಗಂಡಹೆಂಡಿರ ನಡುವೆ ಆಗಾಗ ಸಣ್ಣಪುಟ್ಟ ಕಲಹಗಳು ನಡೆಯುತ್ತಲೇ ಇದ್ದವು.

ಮುನ್ನುವಿನ ಮನೆಯ ಪಾತ್ರೆಗಳೆಂದರೆ, ಕೆಲವು ಮಡಿಕೆಗಳು. ಉಡುಗೆ ಗಳೆಂದರೆ, ತೇಪೆಹಾಕಿದ ಎರಡು–ಮೂರು ಸೀರೆಗಳು. ಇನ್ನು ಗಂಡನ ಬಟ್ಟೆಗಳೂ ಹರಿದ ಬಟ್ಟೆಗಳೇ ಆಗಿದ್ದವು. ಆದರೂ ಹೇಗೋ ಸಂಸಾರ ಜೀವನವನ್ನು ಸಾಗಿಸುತ್ತಿದ್ದರು. ಮನಸ್ಸು ರೋಸಿದಾಗ, ಮುತ್ತುವು ಆಗಾಗ ಹೆಂಡವನ್ನು ಕುಡಿಯುವ ಚಟವನ್ನು ಅಭ್ಯಾಸಮಾಡಿಕೊಂಡಿದ್ದನು. ಇದ ರಿಂದ, ಕೂಡಿಹಾಕಿದ ನಾಲ್ಕಾರು ಪುಡಿಕಾಸುಗಳೂ ಮಾಯವಾಗುತ್ತಿದ್ದವು.

ಇದ್ದಕ್ಕಿದ್ದಂತೆಯೇ ಕೆಲವು ಹೊಸ ಗಿರಾಕಿಗಳು ದೊರೆತು, ಉತ್ತಮ ವಾದ ಜೋಡುಗಳನ್ನು ಹೊಲಿಸಿದ ಪರಿಣಾಮವಾಗಿ ಒಂದು ಸಾರಿ ಒಂದಿಪ್ಪತ್ತು ರೂಪಾಯಿಗಳು ಬಾಕಿ ನಿಂತಿದ್ದವು. ಇವುಗಳನ್ನು ದಾರಿಯಲ್ಲಿ ಜೊತೆಮಾಡಿ ತೆಗೆದುಕೊಂಡು ಹೋಗಿ ಸಂತೆಯಲ್ಲಿ ಒಂದು ಕಂಬಳಿಯನ್ನು

ತರುವಂತೆ ಗಂಡನಿಗೆ ಮುನ್ನುವು ಹೇಳಿದಳು. ಏಕೆಂದರೆ ಮಗು ದುರ್ಗೆಯೂ, ತನ್ನ ಗಂಡನೂ ಚಳಿಗಾಲದಲ್ಲಿ ನಡಗುತ್ತಾ ದಿನಗಳನ್ನು ಕಳೆಯುತ್ತಿದ್ದರು. ಇದ್ದ ಒಂದು ಕಂಬಳಿಯು ಸವೆದಿತ್ತು; ಮತ್ತು ಹತ್ತಾರು ತೇಪೆಗಳನ್ನು ಕಂಡಿತ್ತು. ಮುತ್ತುವು ಆ ಹಳೇ ಕಂಬಳಿಯನ್ನೇ ಹೊದ್ದು, ಸಂತೆಗೆ ಹೋದನು.

ರಾತ್ರಿ ಬಹು ವೇಳೆಯಾದರೂ ಮುತ್ತುವು ಸಂತೆಯಿಂದ ಹಿಂತಿರುಗಲಿಲ್ಲ. ದುರ್ಗಿಯನ್ನು ಮಲಗುವಂತೆ ಮುನ್ನುವು ಹೇಳಿ ಹೇಳಿ ಬೇಸತ್ತಳು. ಆ ಪೋರಿಯು ತನ್ನ ತಂದೆಯು ಮನೆಗೆ ಬರುವವರೆಗೂ ಎಚ್ಚೆತ್ತು ಕುಳಿತಿರುವುದಾಗಿ ಹೇಳಿದಳು. ಮುನ್ನುವಿನ ತಾಳ್ಮೆ ಕೆಡುತ್ತಾ ಬಂದಿತ್ತು. ದುಡ್ಡಿನ ವಿಷಯದಲ್ಲಿ ಅವಳು ಮುತ್ತುವನ್ನು ನಂಬುತ್ತಿರಲಿಲ್ಲ. ಅವನಿಗೆ ಗಾಳನ ಹೆಂಡದಂಗಡಿಯ ದರ್ಶನ ಮಾತ್ರದಿಂದಲೇ, ಮನಸ್ಸಿನ ಸ್ವಾಧೀನತೆಯು ತಪ್ಪುವುದನ್ನು ಅರಿತಿದ್ದ ಮುನ್ನುವು, ತನ್ನ ಗಂಡನು ಮನೆಗೆ ಬಾರದಿದ್ದುದನ್ನು ಕಂಡು ವ್ಯಾಕುಲಿತಳಾದಳು. ದುರ್ಗಿಯಾದರೋ, ತಂದೆಯು ಸಂತೆಯಿಂದ ಮಿಠಾಯಿಗಳನ್ನು ತರಬಹುದೆಂಬ ಆಸೆಯಿಂದ ಎಚ್ಚರವಾಗಿದ್ದಳು.

ಬಾಗಿಲ ಬಳಿ ಸದ್ದಾಯಿತು. ದುರ್ಗಿಯು ಓಡಿಹೋಗಿ ನೋಡಿ ಅಪ್ಪ ಬಂದ ಸುದ್ದಿಯನ್ನು ತಂದಳು. ತಾಯಿಮಕ್ಕಳಿಬ್ಬರೂ ಹೊರಗೆಬಂದು ನೋಡಿ, ಬರಿಗೈಲಿ ಬಂದ ಮುತ್ತುವನ್ನು ಕಂಡು ಅಪ್ರತಿಭರಾದರು. ಎಲ್ಲಕ್ಕೂ ಮಿಗಿಲಾಗಿ, ಹೊದ್ದುಕೊಂಡುಹೋದ ಹಳೆಯ ಕಂಬಳಿಯೂ ಇಲ್ಲದೆ ಬರಿಮೈಲಿ ಮನೆಗೆ ಬಂದಿದ್ದಾನೆ. ಮತ್ತೂ ಆಶ್ಚರ್ಯ! ಹಿಂದೆ ಒಬ್ಬ ಜೊತೆಗಿದ್ದಾನೆ! ಅವನು ಹಳೆಯ ಕಂಬಳಿಯನ್ನು ಹೊದ್ದಿದ್ದಾನೆ. ತನ್ನ ಕೋಪವನ್ನೆಲ್ಲಾ ಮುನ್ನುವು ದುರ್ಗೆಯ ಮೇಲೆ ಕೇಂದ್ರೀಕರಿಸಿ, ಅವಳನ್ನು ದಬ್ಬುತ್ತಾ ಮಲಗುವಂತೆ ಕಳುಹಿಸಿದಳು. ಮುತ್ತುವು ನಿಧಾನವಾಗಿ ಪ್ರವೇಶಿಸಿ, ತನ್ನ ಹಿಂದಿದ್ದ ಬಡಯುವಕನನ್ನು ಮೃದುವಾಗಿ ಹಿಡಿದು ಸ್ವಾಗತಿಸಿ ಒಳಕ್ಕೆ ಕರೆತಂದನು. ಅವನ ಮುಖವು ಕಾಂತಿಯುತವಾಗಿದ್ದಿತು; ನಯನಗಳು ತೇಜಃಪುಂಜವಾಗಿ ಹೊಳೆಯುತ್ತಿದ್ದವು. ಆದರೂ ಮುನ್ನುವು ಅವನನ್ನು ನೋಡಿ ಸ್ವಲ್ಪವೂ ಕನಿಕರಿಸಲಿಲ್ಲ. ಮುತ್ತುವು ಅತಿಥಿಗೆ ಬಡಿಸುವಂತೆ ಹೇಳಿದನು. ಅದಕ್ಕೆ ಉತ್ತರವಾಗಿ, " ಹೊಸ ಕಂಬಳಿ ಎಲ್ಲಿ ಹೇಳು, ಆಮೇಲೆ

ಅನ್ನ ಹಾಕೋದು," ಎಂದು ಗರ್ಜಿಸಿದಳು. ಅವಳನ್ನು ಸಂತೈಸುತ್ತಾ, ಸಂತೇಲಿ ಕಂಬಳಿ ಸಾಲವಾಗಿ ದೊರೆಯಲಿಲ್ಲ, ದಾರಿಯಲ್ಲಿ ದುಡ್ಡು ಜೊತೆಯಾಗಲಿಲ್ಲ. ಗಿರಾಕಿಗಳು ಕೈಕೊಟ್ಟರು ಎಂದು ಹೇಳಿಕೊಂಡನು. ಹೋಗೋವಾಗ ಮುನ್ನುವಿನಿಂದ ಪಡೆದಿದ್ದ ಹಣದಲ್ಲಿ ಉಳಿದಿದ್ದನ್ನು ಕೊಟ್ಟನು. ಅವಳು ಅದನ್ನು ಎಣಿಸಿ, ಉಳಿದ ಹಣವೇನಾಯಿತೆಂದು ಕೇಳಿದಳು. ಸಂತೆಯಿಂದ ಚಳಿಯಲ್ಲಿ ಬರುವಾಗ ಗಾಳನ ಅಂಗಡಿಯಲ್ಲಿ ಮೊಗೆಗಳಿಂದ ಇಳಿಸುತ್ತಿದ್ದ ಹೆಂಡದ ವಾಸನೆಯಿಂದ ಆಕರ್ಷಿತನಾಗಿ ಕುಡಿದುಬಂದನೆಂದು ದೈನ್ಯತೆಯಿಂದ ಹೇಳಿಕೊಂಡನು. ಆಗ ಮುನ್ನುವು ತನ್ನನ್ನು ತಾನು ಮರೆತವಳಾಗಿದ್ದಳು. ಗಂಡನನ್ನು ಕುರಿತು, 'ಕುಡುಕರಿಗೆ ಕೂಳಿಲ್ಲ' ವೆಂದು ಹೇಳಿಬಿಟ್ಟಳು.

ಮುತ್ತುವು ಅಷ್ಟೇ ಪೌರುಷದಿಂದ ಹೆಂಡತಿಯನ್ನು ಬೈದನು. ಇದರಿಂದ ಮುನ್ನುವೂ ಮೆತ್ತಗಾದಳು. ಆದರೂ, ಮನೆಯಲ್ಲಿನ ಕಾರ್ಪಣ್ಯವನ್ನು ನೆನೆದು ದುಃಖಿಸುತ್ತ, ಒಬ್ಬರಿಗೆ ಅನ್ನವಿಲ್ಲದಿದ್ದಾಗ ಇಬ್ಬರಿಗೆ ಹೇಗೆ ಬಡಿಸುವುದು ಎಂದು ಹೇಳಿದಳು. ಆ ಬಳಿಕ, ಬಂದ ಅತಿಥಿಯ ಕಡೆಗೆ ತಿರುಗಿ, "ಲೇ! ನೀನು ಯಾರೋ! ನಿನಗೇನ್ಬೇಕೋ" ಎಂದು ಗರ್ಜಿಸಿ, ಅವನು ಹೊದೆದಿದ್ದ ಕಂಬಳಿಯನ್ನು ಸೆಳೆದುಕೊಂಡು ತಾನು ಹೊದ್ದು ಆ ಮನೆಯಿಂದ ಹೊರಟಳು. ಯುವಕನ ನಿಶ್ಶಬ್ದತೆಯು ಆಕೆಯನ್ನು ಕೆರಳಿಸಿ, 'ನಿನ್ನ ಬಾಯಲ್ಲಿ ನಾಲಗೆ ಇಲ್ವೇ' ಎಂದು ಧಾವಿಸಿ ಬಂದು ಕೇಳಿದಳು. ಏನಾದರೂ ಆತನು ಮಾತನಾಡಲಿಲ್ಲ; ಬೆಪ್ಪನಂತೆ ಹಲ್ಲುಕಿರಿದನು. ಆಗ ಮುತ್ತುವು, ಆ ಮನುಷ್ಯನು ಸಿಕ್ಕಿದಾಗಿನಿಂದಲೂ ಹಾಗೇ ವರ್ತಿಸುತ್ತಿದ್ದಾನೆಂದು ಹೇಳಿದನು.

ಬಳಿಕ ಮುತ್ತುವು, ಆ ಯುವಕನು ರಸ್ತೆಯಲ್ಲಿ ನಗ್ನನಾಗಿ ಚಳಿಯಿಂದ ನಡಗುತ್ತಾ ಬಿದ್ದಿದ್ದ ಸಂಗತಿಯನ್ನು ವಿವರಿಸಿ, ತಾನು ಕನಿಕರಿಸಿ ಅವನಿಗೆ ಕಂಬಳಿ ಹೊದೆಯಿಸಿ, ಕರೆದುತಂದದ್ದಾಗಿ ತಿಳಿಸಿದನು. ಸನ್ನಿವೇಶವು ಸ್ವಲ್ಪ ತಣ್ಣಗಾಯಿತು. ಮುನ್ನುವು ಬಹಳ ದಯೆಯಿಂದ ಕೂಡಿದವಳಾಗಿ ಇದ್ದ ಅನ್ನವನ್ನು ತಂದು ಆ ಬಡ ಅತಿಥಿಗೆ ಕೊಟ್ಟು ಸತ್ಕರಿಸಿದಳು. ಆಗ, ಆ ಯುವಕನು ಕೃತಜ್ಞತೆಯಿಂದ ಕಣ್ಣೆತ್ತಿ ಆಕೆಯನ್ನು ನೋಡಿ ವಿಚಿತ್ರವಾಗಿ

ನಕ್ಕನು. ಈ ವಿಚಿತ್ರ ನಗುವನ್ನು ಕಂಡು ಮುನ್ನುವು ಹೆದರಿ ಗಂಡನ ಬಳಿ ಗೋಡಿದಳು.

ಹೀಗೆ ವರ್ಷವು ಕಳೆಯಿತು. ಯುವಕನು ಮಿಂಚಣ್ಣನೆಂಬ ಹೆಸರಿನಿಂದ ಆ ದಂಪತಿಗಳೊಡನೆ ನೆಲಸಿ ಮೋಚಿಯಂತೆ ಕೆಲಸ ಮಾಡುತ್ತಿದ್ದನು. ಅವನು ಕೆಲಸದಲ್ಲಿ ತೋರಿಸುತ್ತಿದ್ದ ಪ್ರೌಢಿಮೆಯಿಂದ ಅವನು ಹುಟ್ಟು ಮೋಚಿಯಂತೆ ಕಂಡುಬರುತ್ತಿದ್ದನು. ಊರಿನಲ್ಲಿ ಮುತ್ತುವಿನ ಖ್ಯಾತಿಯು ಹಬ್ಬಿದ್ದಲ್ಲದೆ, ಉತ್ತಮವಾದ ಜೋಡುಗಳನ್ನು ಹೊಲಿಸಲು ಬೇರೆ ಬೇರೆ ದೇಶಗಳಿಂದ ಜನರು ಬರುತ್ತಿದ್ದರು. ಮುನ್ನುವಿನ ಕನಸು ನನಸಾಯಿತು. ಮನೆಯಲ್ಲಿ ಲಕ್ಷ್ಮಿಯು ತಾಂಡವವಾಡಿದಳು. ಮಿಂಚಣ್ಣನು ಆ ಮನೆಗೆ ಪ್ರವೇಶಿಸಿದ ವರ್ಷಕ್ಕೆ ಸರಿಯಾಗಿ, ಒಬ್ಬ ಜಮೀನ್ದಾರನು ಒಂದು ಸಂಜೆ ಮುತ್ತುವಿನ ಮನೆಗೆ ಬಂದನು. ಅದೆಷ್ಟು ಅಟ್ಟಹಾಸ, ಅಹಂಭಾವ! ಬಂದದ್ದು ಜೋಡುಕುದುರೆಗಾಡಿಯಲ್ಲಿ. ಅವನ ಹಿಂದೆ ನಾಲ್ಕಾರು ಆಳುಗಳು. ಮುತ್ತುವೂ ಮುನ್ನುವು ಗಾಬರಿಯಿಂದ ಎದ್ದು ತುಟಿಗಳನ್ನೊರಿಸಿಕೊಂಡು ಅಂಜುತ್ತಾ ಅಂಜುತ್ತ ಆತನನ್ನು ಸ್ವಾಗತಿಸಿದರು. ಮಿಂಚಣ್ಣನು ತಲೆಯನ್ನೇ ಎತ್ತದೆ ಕೆಲಸಮಾಡುತ್ತಿದ್ದನು. ಜಮೀನ್ದಾರನು ಜಗ್ಗುಹಾಕಿಕೊಂಡು, ಒಂದು ಆಳಿನ ಕೈಯಲ್ಲಿ ತೊಗಲನ್ನು ತರಿಸಿ ತೋರಿಸಿ, ಅದು ಅಮೂಲ್ಯ ವಾದ ತೊಗಲೆಂದೂ, ಅದರಿಂದ ತನಗೆ ಉತ್ತಮವಾದ ಒಂದು ಜೊತೆ ಮೋಜಾವನ್ನು ಹೊಲಿದುಕೊಡಬೇಕೆಂದೂ ವಿಧಿಸಿದನು. ಅಲ್ಲದೆ, ಅದನ್ನು ಕೆಡಿಸಿದ್ದೇ ಆದರೆ ಮುತ್ತು ಸೆರೆಮನೆಗೆ ಸೇರಬೇಕಾದೀತೆಂದು ಹೆದರಿಸಿದನು. ಆ ವೇಳೆಗೆ ದುರ್ಗಿಯು ಆಡುತ್ತಾ ಅಲ್ಲಿಗೆ ಬಂದಳು. ಮುನ್ನುವು ಅವಳನ್ನು ಬದಿಗೆ ಕಳುಹಿಸಿಕೊಟ್ಟಳು. ಬಾಲಕಿಯನ್ನು ನೋಡಿ ಜಮೀನ್ದಾರನು ಹೂಂಕರಿಸಿದನು. ಮೋಜಾಗಳನ್ನು ಹೊಲಿಯುವ ಕೂಲಿ ಇಪ್ಪತ್ತು ರೂಪಾಯಿಗಳೆಂದು ಹೇಳಿದನು. ಇಷ್ಟೊಂದು ಚರ್ಚೆಯು ನಡೆಯುತ್ತಿದ್ದರೂ ಮಿಂಚಣ್ಣನು ತಲೆಯೆತ್ತದೆ ಕೆಲಸಮಾಡುತ್ತಿದ್ದನು. ಇದರಿಂದ ಬಂದವನ ತಾಳ್ಮೆ ಕೆಟ್ಟಿತು. ಅವನ್ಯಾರೆಂದು ಮುತ್ತುವನ್ನು ಕೇಳಲು, ಆತನು ಮಿಂಚಣ್ಣನು ತನ್ನ ಸಂಬಂಧಿಕನೆಂದೂ, ಸಹೋದ್ಯೋಗಿಯೆಂದೂ ತಿಳಿಸಿ ದನು. ಅಲ್ಲದೆ, ಜಮೀನ್ದಾರನ ಜೋಡುಗಳನ್ನು ಹೊಲಿಯುವ ಯೋಗ್ಯ

ತೆಯೂ ಅವನಿಗಿದೆಯೆಂದು ಹೇಳುತ್ತಾ, ಆತನ ಕಾಲಿನ ಅಳತೆಯನ್ನು ತೆಗೆದುಕೊಂಡನು.

ಜಮೀನ್ದಾರನು ಅವನನ್ನು ಕುರಿತು, "ಲೋ! ಮೂಟೆಯಂತೆ ಕೂತಿದ್ದೀಯಲ್ಲೋ. ಸರಿಯಾಗಿ ಹೊಲಿಯೋ–ಬಿಗಿ ಮಾಡಬೇಡ,' ಎಂದು ಕೂಗಿ ಹೇಳಿದನು. ಆಗ, ಮಿಂಚಣ್ಣನು ಆಗಂತುಕನನ್ನು ಎವೆಯಿಕ್ಕದೆ ನೋಡಿ ತನ್ನ ವಿಚಿತ್ರ ನಗುವನ್ನು ಬೀರಿದನು. ಮುನ್ನುವು ಮುತ್ತುವಿನ ಗಮನವನ್ನು ಆ ಕಡೆಗೆ ಸೆಳೆದಳು. ಜಮೀನ್ದಾರನೂ ಬೆಚ್ಚಿಬಿದ್ದನು. ಆದರೆ ಸುಧಾರಿಸಿಕೊಂಡು ಅವನ ವಿಚಿತ್ರ ನಗುವನ್ನು ಖಂಡಿಸಿ, ಹಲ್ಲುಕಿರಿಯುವ ಬದಲು ಕೆಲಸವನ್ನು ಸರಿಯಾಗಿ ಮಾಡುವಂತೆ ಹೇಳಿ, ಬೊಬ್ಬರಿಯುತ್ತಾ ಹೊರಕ್ಕೆಹೋದನು.

ಸ್ವಲ್ಪ ಹೊತ್ತಿನ ನಂತರ ಮುತ್ತುವು, ಆ ಕೆಲಸವನ್ನು ಅಂದವಾಗಿಯೂ ಸರಿಯಾಗಿಯೂ ಮಾಡುವಂತೆ ಹೇಳಿ, ಮಿಂಚಣ್ಣನಿಗೆ ತೊಗಲನ್ನು ಒಪ್ಪಿಸಿದನು. ಆಗ, ಅವನು ತಲೆತಗ್ಗಿಸಿ, ಅಳತೆಯನ್ನು ನೋಡದೆಯೇ ಇಬ್ಭಾಗವಾಗಿ ಸೀಳಿದನು. ಇದನ್ನು ಕಂಡ ಆ ದಂಪತಿಗಳು ಚೀರಿದರು. ಮುತ್ತುವು ಗಾಬರಿಯಿಂದ, "ಅಯ್ಯೋ ಮಿಂಚಣ್ಣಾ, ಏನಪ್ಪಾ ಮಾಡಿದೆ, ನಾವು ಹಾಳಾಗಿ ಹೋದೆವಲ್ಲಾ! ಇವತ್ತೇನಾಯ್ತಪ್ಪ ನಿನಗೆ, ಹೆದರಿಕೊಂಡಿದ್ದೀಯಾ? ಈಗ ಹೇಗೆ ಮಾಡಿದರೂ ಮೋಜಾ ಆಗಲಾರದಲ್ಲಾ, ಚಡಾವು ಆಗುವಂತೆ (ಹಾವುಗೆ) ಹರಿದಿದ್ದೀಯಲ್ಲಾ, ಎಂದು ಕಿರಚಿದನು.

ಆ ಸಮಯಕ್ಕೆ ಸರಿಯಾಗಿ ಜಮೀನ್ದಾರನ ಕಡೆಯ ಆಳು, ಏದುತ್ತ ಗಾಬರಿಯಿಂದ ಓಡಿಬಂದು ತನ್ನ ಯಜಮಾನನು ಗಾಡಿಯಿಂದ ಬಿದ್ದು ಅಪಘಾತವಾಗಿ, ಸತ್ತುಹೋದನೆಂದೂ, ಇನ್ನು ಆತನಿಗೆ ಮೋಜಾಗಳ ಅಗತ್ಯವಿಲ್ಲವೆಂದೂ, ಕೊಟ್ಟ ತೊಗಲಿನಿಂದ ಕೇವಲ ಒಂದು ಜೊತೆ, ಹೆಣದ ಕಾಲುಗಳಿಗೆ ತೊಡಿಸುವ ಪಾದುಕೆಗಳನ್ನು ಹೊಲಿಸಿಕೊಟ್ಟರೆ ಸಾಕೆಂದೂ ತಿಳಿಸಿ ಕಣ್ಣೀರು ಮಿಡಿದನು. ಇದನ್ನು ಕೇಳಿ ಮುನ್ನುವು ಆಶ್ಚರ್ಯಚಕಿತಳಾಗಿ ಮಿಂಚಣ್ಣನನ್ನು ನೋಡಿದಳು. ಆತನು ಆಗಲೇ ಪಾದುಕೆಗಳನ್ನು ಹೊಲಿಯುತ್ತಿದ್ದನು.

ಮತ್ತೊಂದು ವರ್ಷವು ಕಳೆಯಿತು. ಒಂದು ಸಾಯಂಕಾಲ ಸಮಯ ದಲ್ಲಿ ಒಬ್ಬ ಶ್ರೀಮಂತರಮಣಿಯು ಇಬ್ಬರು ಅವಳ ಬಾಲಕಿಯರೊಡನೆ ಮುತ್ತುವಿನ ಮನೆಗೆ ಬಂದಳು. ಆಕೆಯು ಸುಶೀಲೆ, ಗಂಭೀರೆ ಮತ್ತು ನಿಗರ್ವಿಯಾಗಿದ್ದಳು. ಅವಳು ಮುನ್ನುವಿನೊಡನೆ ವಿನಯದಿಂದ ಮಾತ ನಾಡುತ್ತಾ ತನ್ನ ಬಾಲಕಿಯರಿಗೆ ಮೋಜಾಗಳನ್ನು ಹೊಲಿದುಕೊಡಬೇಕೆಂದು ಹೇಳಿದಳು. ಆ ಬಾಲಿಕೆಯರು ಸುರೂಪಿಗಳಾಗಿದ್ದರು. ಒಬ್ಬ ಕುವರಿಯ ಬಲಗಾಲು ಕುಂಟಾಗಿದ್ದಿತು. ಅದಕ್ಕೆ ಕಾರಣವನ್ನು ಮುನ್ನುವು ಕೇಳಿದಳು. ಆಗ ಶ್ರೀಮಂತ ವನಿತೆಯು, ಆ ಮಕ್ಕಳು ತನ್ನ ಸಾಕುಮಕ್ಕಳೆಂತಲೂ ತನಗಿದ್ದ ಒಂದು ಮಗುವು ದೈವಾಧೀನವಾಯಿತೆಂದೂ ಹೇಳಿಕೊಂಡನು. ಅಲ್ಲದೆ ಆ ಮಕ್ಕಳು ತನ್ನ ಪೋಷಣೆಗೆ ಬಂದ ರೀತಿಯನ್ನು ವಿವರಿಸುತ್ತಾ, "ಆ ಬಾಲಕಿಯವರ ಮಾತೆಯು ಮಕ್ಕಳಿಗೆ ಜನ್ಮವಿತ್ತ ಏಳನೆಯ ದಿನ ಭಯಪೀಡಿತಳಾದಳೆಂದೂ, ಸಂಕಟದಿಂದ ಹೊರಳಾಡುವಾಗ ಮಗುವಿನ ಕಾಲಿನಮೇಲೆ ಬಿದ್ದಳೆಂದೂ, ಆ ಮಗುವಿನ ಕಾಲು ಕುಂಟಾಯಿತೆಂದೂ ತಿಳಿಸಿದಳು. ಅವರ ವಾಸ ಈ ಶ್ರೀಮಂತಸ್ತ್ರೀಯ ನೆರೆಯಲ್ಲಿ. ಮಕ್ಕಳ ತಂದೆಯಾದರೋ ಯೋಧ. ದೇಶಾಂತರದ ರಣಭೂಮಿಯಲ್ಲಿ ಮಡಿದನು. ಅನಾಥ ಬಾಲಕಿಯರನ್ನು ಆಕೆಯು ತಂದು ಸಾಕುತ್ತಿರುವುದಾಗಿ ಹೇಳಿದಳು. ಮಿಚಣ್ಣನು ಆ ಮನೆಗೆ ಬಂದಮೇಲೆ ಮೊದಲನೆಯ ಬಾರಿ ಕೆಲಸವನ್ನು ಬಿಟ್ಟು ಆ ಮಕ್ಕಳನ್ನು ಆಗಾಗ ನೋಡುತ್ತಿದ್ದನು. ಆಕೆಯು ಮಕ್ಕಳ ಕಾಲುಗಳ ಅಳತೆಯನ್ನು ಕೊಟ್ಟು ಹೋಗಿಬರುವುದಾಗಿ ತಿಳಿಸಿ, ಎದ್ದಳು. ಮುನ್ನುವು ದೀಪವನ್ನು ತಂದು ಆ ಹೆಂಗಸಿಗೆ ದಾರಿಯನ್ನು ತೋರಿಸಿಕೊಟ್ಟಳು.

ಇದ್ದಕ್ಕಿದ್ದಂತೆಯೇ ಮುನ್ನುವು ಮಿಂಚಣ್ಣನನ್ನು ನೋಡಿದಳು. ಅವನು ಮೂರನೆಯ ಬಾರಿ ವಿಚಿತ್ರವಾಗಿ ನಕ್ಕನು. ಆಗ ಭೀತಳಾದ ಮುನ್ನುವು ಗಂಡನನ್ನು ಕರೆದು ತೋರಿಸಿದಳು. ಮುತ್ತುವು, "ಮಿಂಚಣ್ಣಾ ! ನೀನ್ಯಾ ರಪ್ಪಾ, ಚಂದ್ರನಂತೆ ಹೊಳೆಯುತ್ತಿದ್ದೀಯಲ್ಲಾ, ನಮಗೆ ಗೊತ್ತಾಗುವುದಿಲ್ಲ. ನಿನ್ನ ಈ ವಿಚಿತ್ರ ನಗುವಿಗೆ ಕಾರಣವೇನು ? ಹೀಗೆ ಮೂರು ವರ್ಷಕ್ಕೆ ನೀನು ಮೂರಿ ಬಾರಿ ನಕ್ಕಿದ್ದೀಯಲ್ಲಾ, ಇದರ ಅರ್ಥವೇನು?" ಎಂದನು. ಆಗ

ಮಿಂಚಣ್ಣನು, ನಾನು ಮೂರುಬಾರಿ ನೀತಿಯನ್ನು ಭೂಲೋಕದಲ್ಲಿ ಕಲಿತಾಗ ನಕ್ಕೆನು. ನನ್ನ ಚರಿತ್ರೆಯನ್ನು ಕೇಳಿರಿ: ನಾನು ಯಮದೂತನು (ಮುತ್ತು, ಮುನ್ನು ಮತ್ತು ದುರ್ಗಿ ಮೂವರೂ ಮೊಣಕಾಲೂರಿ, ಕೈಜೋಡಿಸಿ ಕುಳಿತರು.) ಯಮನು ಅಪ್ಪಣೆಕೊಟ್ಟು, ಈ ದಿನ ಬಂದಿದ್ದ ಮಕ್ಕಳ ಮಾತೆಯ ಪ್ರಾಣವನ್ನು ತೆಗೆದುಕೊಂಡುಬಾಯೆಂದು ಕಳುಹಿಸಿದನು. ಪ್ರಸೂತಿಗೃಹದಲ್ಲಿದ್ದ ಆಕೆಯನ್ನು ಮರಣಕ್ಕೆ ಗುರಿಮಾಡಿದರೆ ಮಕ್ಕಳು ಅನಾಥರಾಗುವರೆಂಬ ಶಂಕೆಯಿಂದ ಹಿಂತಿರುಗಿಹೋದೆನು. ಇದರಿಂದ ಕುಪಿತ ನಾದ ಯಮನು ಪುನಃ ನನ್ನನ್ನು ಕಳುಹಿಸಿ ಆ ಮಾತೆಯ ಪ್ರಾಣವನ್ನು ತೆಗೆದುಬರುವಂತೆ ಹೇಳಿದ್ದಲ್ಲದೆ, ನನಗೆ ಶಾಪವನ್ನು ಕೊಟ್ಟು ಭೂಲೋಕ ದಲ್ಲಿದ್ದು ಮೂರು ತತ್ವಗಳನ್ನು ಕಲಿತುಬಾ ಎಂದು ಹೇಳಿದನು. ನಾನು ಮಕ್ಕಳ ಮಾತೆಯ ಪ್ರಾಣವನ್ನು ತೆಗೆದೊಯ್ದೆನು. ಆಕೆಯು ಮರಣ ಸಂಕಟದಿಂದ ಚೀರಿ ಒಂದು ಮಗುವಿನಮೇಲೆ ಬಿದ್ದಳು. ಆ ಮಗುವಿನ ಕಾಲು ಡೊಂಕಾಯಿತು ನಾನು ಯಮಲೋಕಕ್ಕೆ ಮರಳಿ ಪ್ರಾಣವನ್ನು ಯಮನಿಗೆ ಒಪ್ಪಿಸಿದೆ. ಒಡನೆಯೇ ಶಾಪಗ್ರಸ್ಥನಾಗಿ, ನನ್ನ ರೆಕ್ಕೆಗಳು ಕಳಚಿಹೋದವು. ನಾನು ಭೂಮಿಯ ಮೇಲೆ ಚರಂಡಿಯ ಪಕ್ಕದಲ್ಲಿ ಬಿದ್ದು ಹೊರಳಾಡು ತ್ತಿದ್ದೆ. (ಮುತ್ತಣ್ಣನನ್ನು ಕುರಿತು) ನೀನು ಅಲ್ಲಿಗೆ ಬಂದೆ, ದಯೆತೋರಿಸಿ ನಿಮ್ಮ ಮನೆಗೆ ತಂದೆ. ನಿನ್ನ ಹೆಂಡತಿಯು ಉಗ್ರಸ್ವರೂಪದವಳು. ಅವಳ ಮುಖದ ಮೇಲೆ ಸಾವಿನ ಉಗ್ರತೆಯು ತಾಂಡವಾಡುತ್ತಿತ್ತು. (ಮುನ್ನುವು ನಡುಗಿದಳು). ನನ್ನನ್ನು ಹೊರಕ್ಕೆ ತಳ್ಳಲು ಬಂದಾಗ ಆಕೆಯ ಮುಖದಿಂದ ಸಾವಿನ ಹಬೆಯು ಬೀಸುತ್ತಿತ್ತು. ಆ ದಿನ ನನ್ನನ್ನು ಹೊರಕ್ಕೆ ಹಾಕಿದ್ದರೆ, ಆಕೆಯು ಸಾಯುತ್ತಿದ್ದಳು. ಆದರೆ ಆಕೆಯ ಮನದಲ್ಲಿ ಪ್ರೇಮವು ಮೂಡಿ, ನನಗೆ ಆಶ್ರಯವಿತ್ತು, ಅನ್ನವನ್ನಿಟ್ಟಳು. ಅವಳಿಂದ ಸಾವು ಹರಿದು ಹೋಯಿತು. ಪ್ರೇಮವು ಮನುಷ್ಯನ ಜೀವನಕ್ಕೆ ಅವಶ್ಯಕವೆಂಬ ಮೊದಲನೆಯ ತತ್ವವನ್ನು ಕಲಿತೆನು. ಇದಕ್ಕಾಗಿ ಮೊದಲನೆಯ ಬಾರಿ ನಕ್ಕೆನು. ಜಮೀ ದಾರನು ನಿಮ್ಮ ಮನೆಗೆ ಬಂದ ಕ್ಷಣದಲ್ಲಿ ಅವನಿಗೆ ಸಾವು ಕಾದಿತ್ತು. ಅದರ ಅರಿವಿಲ್ಲದೆಯೇ, ಅವನು ದರ್ಪದಿಂದ ಕುಣಿದಾಡಿದನು. ಅದನ್ನು ತಿಳಿದು ನಾನು ನಕ್ಕೆನು. ಅಲ್ಲದೆ, ಮುಂದಿನ ಘಳಿಗೆಯಲ್ಲಿ ನಡೆಯುವ ಘಟನೆಯನ್ನು

ತಿಳಿಯದ ಮಾನವನು ಮದಾಂಧನಾಗಿ ಮೆರೆಯುತ್ತಾನೆಂಬ ತತ್ವವನ್ನು ತಿಳಿದೆನು. ಈ ದಿನ ಆ ಯುವತಿಯು ಆ ಮಕ್ಕಳನ್ನು ಕರೆತಂದಳು. ತಾಯಿ ತಂದೆ ಸತ್ತರೂ, ಅವುಗಳ ನೆರವಿಗಾಗಿ ದೇವರು ಬೇರೊಬ್ಬರನ್ನು ಗೊತ್ತು ಮಾಡಿರುವುದನ್ನು ತಿಳಿದೆನು. ಅಲ್ಲದೆ, ಸಾಕುತಾಯಿಯ ನೈಜವಾದ, ಪರಿಶುದ್ಧವಾದ ಪ್ರೇಮವು ಆ ಮಕ್ಕಳ ಜೀವನಕ್ಕೆ ಬೆಳಕನ್ನು ನೀಡಿದವು. ತಾಯಿ ತಂದೆ ಸತ್ತರೆ ಮಕ್ಕಳಿಗೆ ಹಲುಬುವುದು ಮೂರ್ಖತನವೆಂಬ ಮೂರನೆಯ ತತ್ವವನ್ನೂ ತಿಳಿದೆನು. ಇನ್ನು ನನ್ನ ಶಾಪವು ವಿಮೋಚನೆಯಾಯಿತು. ಮಾನವನ ಜೀವನಕ್ಕೆ ಪ್ರೇಮವೇ ಆಧಾರವೆಂದು ತಿಳಿದೆನು," ಎಂದು ಹೇಳಿದನು.

ಮೂವರೂ ದೀನರಂತೆ ಕಣ್ಮುಚ್ಚಿ ಆತನ ಪಾದಮುಟ್ಟಿ ನಮಸ್ಕರಿಸಿದರು. ಕಣ್ಣುಬಿಟ್ಟು ನೋಡುವಾಗ ಮಿಂಚಣ್ಣನು ಮಾಯವಾಗಿದ್ದನು. ಆ ದಂಪತಿಗಳು ಅಂದಿನಿಂದ ಮೊದಲು ಅವಿಶ್ರಾಂತರಾಗಿ ದುಡಿಯುತ್ತಿದ್ದರು. ಸ್ವಲ್ಪವೂ ಬೇಸರಗೊಳ್ಳದೆ ಬಂದ ಅತಿಥಿಗಳಿಗೆ ಮುನ್ನುವು ಸತ್ಕಾರ ಮಾಡುತ್ತಾ ಇಹ ಜೀವನದ ಸುಖವನ್ನು ಬಯಸದೆ ಸ್ವಾರ್ಥತ್ಯಾಗಿಯಾಗಿ ಪತಿಪುತ್ರಿಯರೊಡನೆ ಬಾಳಿದಳು.

## ಪ್ರಶ್ನೆಗಳು

೧. ಮುನ್ನುವು ಪತಿಯೊಡನೆ ಬಂದ ಅತಿಥಿಯನ್ನು ಆದರಿಸದೆ ತಿರಸ್ಕರಿಸಲು ಕಾರಣವೇನು?

೨. ಅತಿಥಿಯು ಮೊದಲ ಬಾರಿ ಏಕೆ ನಕ್ಕನು?

೩. ಜಮೀನುದಾರನ ತೊಗಲನ್ನು ಮಿಂಚಣ್ಣನು ಅಳತೆಯಿಲ್ಲದೆ ಏಕೆ ಸೀಳಿದನು?

೪. 'ಮಾನವನ ಜೀವನ ಧ್ಯೇಯವು ನಿಷ್ಕಳಂಕ ಪ್ರೇಮ' ಹೇಗೆ, ವಿವರಿಸಿ.

# ಕರ್ನಾಟಕ ಸ್ಥಾಪನಾಚಾರ್ಯ

ಪುಣ್ಯಭೂಮಿಯೂ ರಮ್ಯಭೂಮಿಯೂ ಆದ ಭಾರತದಲ್ಲಿ ಆಗಾಗ ಧರ್ಮಸಂಸ್ಥಾಪಕರೂ, ಆಧ್ಯಾತ್ಮಿಕ ಜ್ಞಾನಸಂಪನ್ನರೂ ರಾಜಕಾರಣಿಗಳೂ ಮತ್ತು ರಾಜ್ಯಸ್ಥಾಪನಾಚಾರ್ಯರೂ ಆಗಾಗ ಅವತರಿಸಿ ಸ್ಫೂರ್ತಿಯನ್ನುಂಟು ಮಾಡಿ ಚಿರಸ್ಮರಣೀಯರಾಗಿದ್ದಾರೆ. ಹೀಗೆ ಕರ್ನಾಟಕ ಸಂಸ್ಥಾನ ಸ್ಥಾಪನೆಗೆ ನೆರವು ನೀಡಿ, ನಾಡ ಸಂಸ್ಕೃತಿಯುಳಿಯುವಂತೆ ಶ್ರಮಿಸಿ, ಆಚಂದ್ರಾರ್ಕ ಪರ್ಯಂತ್ರವೂ ಕೀರ್ತಿಶಾಲಿಗಳಾದವರೂ ವಿದ್ಯಾರಣ್ಯರು. ಕರ್ಮಯೋಗಿಯೂ ಜ್ಞಾನಸಂಪನ್ನರೂ, ಅಸಾಧಾರಣ ಪಂಡಿತರೂ ಆದ ಈ ಸ್ವಾರ್ಥತ್ಯಾಗಿಯ ಪುಣ್ಯಚರಿತ್ರೆಯನ್ನು ಓದುವಾಗ ಕುರುಕುಲದ ಆಚಾರ್ಯರಾದ ದ್ರೋಣರ ಸವಿನೆನಪು ಬರುವುದರಲ್ಲಿ ಸಂಶಯವಿಲ್ಲ.

ತುಂಗಭದ್ರಾ ನದಿಯ ದಕ್ಷಿಣ ತೀರದಲ್ಲಿರುವ ಪಂಪಾಕ್ಷೇತ್ರ (ಬಳ್ಳಾರಿ ಜಿಲ್ಲೆಯ ಹೊಸಪೇಟೆಗೆ ಸುಮಾರು ಒಂಭತ್ತು ಮೈಲಿ ದೂರದಲ್ಲಿದೆ) ದ ಸಮೀಪದಲ್ಲಿ ಆಚಾರ್ಯಸಂಪನ್ನನೂ, ಶ್ರೋತ್ರೀಯನೂ ಆದ ಮಾಯಣ ನೆಂಬ ಒಬ್ಬ ಬ್ರಾಹ್ಮಣನು ವಾಸಿಸುತ್ತಿದ್ದನು. ಆತನಿಗೆ ಶ್ರೀಮತಿಯೆಂಬ ಸುಶೀಲೆಯಾದ ಪತ್ನಿಯಿದ್ದಳು. ವಿರೂಪಾಕ್ಷಸ್ವಾಮಿಯ ವರದಿಂದ, ಈ ದಂಪತಿ ಗಳಿಗೆ ಅವರ ಇಳಿವಯಸ್ಸಿನಲ್ಲಿ ಮೂವರು ಮಕ್ಕಳಾದರು. ಇವರಲ್ಲಿ ಹಿರಿಯನೇ ಮಾಧವನೆಂಬುವನು ; ಇವನೇ ಮುಂದೆ ವಿದ್ಯಾರಣ್ಯರೆಂದು ಪ್ರಸಿದ್ಧನಾದನು. ಮಾಧವನ ವಿದ್ಯಾಭ್ಯಾಸವು ಸದ್ಗುರುಗಳ ಸಮ್ಮುಖದಲ್ಲಿ ನಡೆದು ಚತುರ್ವೇದ ಗಳಲ್ಲಿಯೂ, ಉಪನಿಷತ್ತುಗಳಲ್ಲಿಯೂ ಪಂಡಿತನಾದನು. ಈತನ ಪ್ರೌಢ ವಿದ್ಯಾಭ್ಯಾಸವು ಕಂಚಿಯಲ್ಲಿನ ಕಾಮಕೋಟಿ ಪೀಠಾಧ್ಯಕ್ಷರೂ, ವಿದ್ಯಾತೀರ್ಥ ರೆಂಬ ಬಿರುದಾಂಕಿತರೂ ಆದ ಸರ್ವಜ್ಞ ವಿಷ್ಣುಭಟ್ಟರ ಬಳಿಯಲ್ಲಿ ನಡೆಯಿತು. ಜ್ಞಾನಚಕ್ಷುವನ್ನು ತೆರೆದು ಜ್ಞಾನಾಂಧಕಾರವನ್ನು ತೊಲಗಿಸಿ ಜೀವನದ ಪ್ರಭೆ ಯನ್ನುಂಟು ಮಾಡುವ ಗುರುವಿನ ಶಕ್ತಿಯು ತ್ರಿಮೂರ್ತಿಗಳ ಶಕ್ತಿಗೆ ಸಮ ನಾದುದು, ಎಂದು ಚೆನ್ನಾಗಿ ಅರಿತಿದ್ದ ಮಾಧವನು ತನ್ನ ಗುರುವನ್ನು

ತ್ರಿಕರಣ ಶುದ್ಧಿಯಿಂದ ಪೂಜಿಸುತ್ತಿದ್ದನು. ವಿದ್ಯಾತೀರ್ಥರಲ್ಲದೆ, ಭಾರತೀ ತೀರ್ಥರೂ, ಶಂಕರಾನಂದರೂ ಮತ್ತು ಶ್ರೀಕಂಠನಾಥರೂ ಮಾಧವನ ಗುರು ಪರಂಪರೆಗೆ ಸೇರಿದ್ದರು. ಈ ಗುರುಗಳೆಲ್ಲರೂ ಶಿಷ್ಯರಿಗೆ ವಿದ್ಯಾದಾನ ಮಾಡು ತ್ತಿದ್ದರಲ್ಲದೆ, ಅವರಿಗೆ ವ್ಯಾಯಾಮವನ್ನು ಕಲಿಸುತ್ತಿದ್ದರು; ಅಲ್ಲದೆ, ಜನ್ಮ ಭೂಮಿಗೆ ಆಗ ವಿಧರ್ಮೀಯರಿಂದ ಒದಗಿದ್ದ ಸಂಕಟವನ್ನು ತಿಳಿಸಿ, ಶಿಷ್ಯರು ಆರ್ಯಧರ್ಮ, ಸಂಸ್ಕೃತಿ ಮತ್ತು ಮಾನಸಂರಕ್ಷಣೆಗಾಗಿ ಕಂಕಣಬದ್ಧರಾಗಿ ನಿಲ್ಲುವಂತೆ ಬೋಧಿಸುತ್ತಿದ್ದರು.

ಮಾಧವನ ವಿವಾಹವು ಚಾಲುಕ್ಯ ರಾಜನ ಮಂತ್ರಿಯ ಪುತ್ರಿ, ವೀತಿಹೋತ್ರಿದೇವಿಯೆಂಬ ಕನ್ಯಾಮಣಿಯೊಡನೆ ಜರುಗಿತು ಇದಾದ ಕೆಲವು ದಿನಗಳಲ್ಲಿ ತಂದೆಯು ಮಡಿದನು. ಕುಟುಂಬವು ಕಷ್ಟಪರಂಪರೆಗಳಿಗೆ ಸಿಕ್ಕಿತು; ಜೀವನ ನಿರ್ವಾಹವೇ ಸಮಸ್ಯೆಯಾಗಿ ನಿಂತಿತು. ಹೀಗಿದ್ದರೂ, ಮಾಧವನು ದೇಶೋನ್ನತಿಯ ಚಿಂತೆಯನ್ನು ಮಾಡುತ್ತಲೇ ಇದ್ದನು. ಆಗಾಗ, ಏಕಾಂಗಿ ಯಾಗಿ ಧ್ಯಾನಮಾಡುತ್ತಾ ಸಮಾಧಿಯಲ್ಲಿರುವ ಅಭ್ಯಾಸವನ್ನಿಟ್ಟುಕೊಂಡಿ ದ್ದನು. ಅವನ ಆರಾಧ್ಯದೇವತೆ ಭುವನೇಶ್ವರಿದೇವಿಯಾಗಿದ್ದಳು. ಒಂದು ಚಿತ್ತಾಕರ್ಷಕವಾದ ನಡುರಾತ್ರಿಯಲ್ಲಿ, ಮಾಧವನು ಹೇಮಕೂಟಾದ್ರಿಯ ಸಮೀಪದಲ್ಲಿದ್ದ ಒಂದು ದೇವದಾರು ವೃಕ್ಷಕ್ಕೆ ಒರಗಿ, ಸಮಾಧಿಸ್ಥಿತಿಯಲ್ಲಿದ್ದಾಗ ಆತನ ಆರಾಧ್ಯದೇವತೆಯು ಕಾಣಿಸಿಕೊಂಡು, ಅಶಕ್ತರಾಗಿಯೂ, ದೇಶ ಪ್ರೇಮ ಶೂನ್ಯ ಹೃದಯವುಳ್ಳವರಾಗಿಯೂ ಇರುವ ಕರ್ನಾಟಕರನ್ನು ಒಟ್ಟು ಗೂಡಿಸಿ, ದೇಶೋದ್ಧಾರ ಮಾಡಬೇಕೆಂದು ಹೇಳಿದಂತೆ ಭಾಸವಾಯಿತು. ಅನಂತರ, ಮಾಧವನ ಕಣ್ತೆರೆದು ಆವೇಶಪೂರ್ವಕವಾಗಿ ತನ್ನಷ್ಟಕ್ಕೆತಾನೇ ಮಾತನಾಡಿಕೊಳ್ಳುತ್ತಾ, "ತಾಯೇ! ಇಂದು ನಿನ್ನ ಆಜ್ಞೆಯನ್ನು ಶಿರಸಾ ವಹಿಸುತ್ತೇನೆ. ಕರ್ನಾಟಕರನ್ನು ಒಟ್ಟುಗೂಡಿಸುವ ಚೈತನ್ಯವನ್ನು ದಯಪಾ ಲಿಸು ತಾಯಿಯೇ! ನನ್ನ ಯೋಗದಂಡವೇ ಕೋದಂಡವಾಗುವಂತೆಯೂ, ನನ್ನ ಜಪಮಾಲೆಯು ಶತ್ರುಪಾಶವಾಗುವಂತೆಯೂ ವರವನ್ನು ಕೊಡು. ಇಂದಿನಿಂದ ನಾನು ಸಂನ್ಯಾಸಿಯಾಗಿ, ಕರ್ನಾಟಕ ಸ್ಥಾಪನೆಗೆ ನಿಲ್ಲುವೆನು," ಹೇಳಿಕೊಂಡನು. ತರುವಾಯ ಮಾಧವನು ತನ್ನ ಪ್ರಿಯಪತ್ನಿಯ ಒಪ್ಪಿಗೆ

ಯನ್ನು ಪಡೆದು. ಸಂನ್ಯಾಸಿಯಾಗಿ 'ವಿದ್ಯಾರಣ್ಯ'ರೆಂಬ ಹೆಸರನ್ನು ಧಾರಣೆ ಮಾಡಿಕೊಂಡನು.

ಚಾಲುಕ್ಯನ ಮಗ ವಿಜಯಧ್ವಜನು ಆನೆಗೊಂದಿಯನ್ನು ಆಳುತ್ತಿದ್ದಾಗ ತುಂಗಭದ್ರೆಯ ದಕ್ಷಿಣ ತೀರದಲ್ಲಿ ವಿಜಯನಗರವೆಂಬ ಹೊಸಪಟ್ಟಣವನ್ನು ಕಟ್ಟಿಸಿ, ಅದನ್ನು ಕೋಟೆ ಕೊತ್ತಲಗಳಿಂದ ಭದ್ರಪಡಿಸಿದನು. ಕೆಲಕಾಲದ ನಂತರ, ಮುಸಲ್ಮಾನರ ಹಾವಳಿಯಿಂದ ಇದು ಪಾಳುಬಿತ್ತು. ಇದನ್ನು ಕಂಡ ವಿದ್ಯಾರಣ್ಯರು ಖಿನ್ನರಾಗುತ್ತಿದ್ದರು. ಈ ಕೋಟೆಯಿದ್ದ ಸ್ಥಳವು ರಾಜಧಾನಿ ಯಾಗಲು ಯೋಗ್ಯವಾಗಿದ್ದು ಶತ್ರುಗಳ ಪ್ರವೇಶಕ್ಕೆ ದುಸ್ಸಾಧ್ಯವಾಗಿತ್ತು. ಏಕೆಂದರೆ, ವಿಜಯನಗರದ ಒಂದು ಕಡೆ ಋಷ್ಯಮೂಕಪರ್ವತ, ಮತ್ತೊಂದು ಕಡೆ ಮಾತಂಗ ಪರ್ವತ, ಹೀಗೆ ಆ ಸ್ಥಳವು ಅಭೇದ್ಯವಾಗಿತ್ತು.

ವಿದ್ಯಾರಣ್ಯರು ಹೊಸರಾಜ್ಯವನ್ನು ಸ್ಥಾಪಿಸಬೇಕೆಂದು ತವಕಪಡುತ್ತ, ಸೂಕ್ತಸಮಯ ಕಾಯುತ್ತಿದ್ದರು. ಒಂದು ಅಪರಾಹ್ನದಲ್ಲಿ, ಒಂದು ಹೊಂಗೆಯ ಮರದ ನೆರಳಿನಲ್ಲಿ ಇಬ್ಬರು ಸುಂದರ ತರುಣರು ನಿದ್ರಿಸುತ್ತಿದ್ದರು. ಅವರಲ್ಲೊಬ್ಬನ ತಲೆಯ ಮೇಲೆ ಘಟಸರ್ಪವೊಂದು ಹೆಡೆಯೆತ್ತಿ ನೆರಳನ್ನು ಒದಗಿಸಿತ್ತು. ಈ ಆಶ್ಚರ್ಯಕರವಾದ ದೃಶ್ಯವನ್ನು ಆ ಮಾರ್ಗದಲ್ಲಿಯೇ ಬಂದ ವಿದ್ಯಾರಣ್ಯರು ನೋಡಿ ಚಕಿತರಾದರು. ಅವರು ಮಲಗಿದ್ದವರ ಹತ್ತಿರ ಬಂದು ನಿಂತ ನಂತರ ಹಾವು ಸರಿದು ಹೊರಟು ಹೋಯಿತು. ಮಲಗಿದ್ದವರು ಎದ್ದನಂತರ, ವಿದ್ಯಾರಣ್ಯರು ಅವರನ್ನು ಮಾತನಾಡಿಸಿ ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ಅಲ್ಲಿ ವಿಚಾರಿಸಿದ ನಂತರ, ಆ ತರುಣರು ಹುಕ್ಕ ಬುಕ್ಕರೆಂದೂ, ಮಂಗಳನಿಲಯದ ಅರಸ, ಸಂಗಮರಾಯನು ಸಂಹರಿಸಲ್ಪಟ್ಟು ದೇಶಭ್ರಷ್ಟರಾದ ಅರಸು ಕುವರರು ಪ್ರತಾಪರುದ್ರನ ಬಳಿ ಆಶ್ರಯಪಡೆದವರೆಂದೂ ಗೊತ್ತಾಯಿತು. ದೆಹಲಿಯ ಬಾದಷಹರು ಓರಂಗಲ್ಲನ್ನು ಸ್ವಾಧೀನಪಡಿಸಿಕೊಂಡನಂತರ ನೆಲೆತಪ್ಪಿದ ಹುಕ್ಕಬುಕ್ಕರು ವಿಜಯನಗರದ ಕಡೆಗೆ ಹೊರಟರು.

ಇಷ್ಟರಲ್ಲಿ ಮಹಮುದ್ ಬಿನ್ ತೊಗಲಕನು ಆನೆಗೊಂದಿಯನ್ನು ಆಕ್ರಮಣ ಮಾಡಲು ಒಂದು ದೊಡ್ಡ ಸೈನ್ಯವೊಂದನ್ನು ಕಳುಹಿಸಿದ್ದನು. ವಿದ್ಯಾರಣ್ಯರು ಹುಕ್ಕಬುಕ್ಕರನ್ನು ಹುರಿದುಂಬಿಸಿ, ಆನೆಗೊಂದಿಯ ಪರವಾಗಿ ಯುದ್ಧ ಮಾಡುವಂತೆ ಪ್ರೇರೇಪಿಸಿ ಕಳುಹಿಸಿದರು. ಆ ಸಹೋದರರಾದರೋ ವಿದ್ಯಾರಣ್ಯರನ್ನು

ಕಂಡಕೂಡಲೇ ಅವರನ್ನು ಗುರುಗಳಾಗಿ ಪರಿಗ್ರಹಿಸಿಕೊಂಡು ವಿಶ್ವಾಮಿತ್ರರನ್ನು ಆಶ್ರಯಿಸಿ ಹೊರಟ ರಾಮಲಕ್ಷ್ಮಣರಂತೆ ಅನುಯಾಯಿಗಳಾದರು. ಜಂಬುಕೇಶ್ವರರಾಯನು ಆಗ ಆನೆಗೊಂದಿಯನ್ನು ಆಳುತ್ತಿದ್ದನು. ಆತನಿಗೆ ಪುತ್ರರಿರಲಿಲ್ಲ. ಯುದ್ಧತಂತ್ರ ನಿಪುಣಳೂ, ಸ್ವಯಂ ಯೋಧಳೂ ಮತ್ತು ಅನುಪಮ ಸುಂದರಿಯೂ ಆದ ಗಿರಿಜಾಂಬೆಯೆಂಬ ಒಬ್ಬ ಮಗಳಿದ್ದಳು. ಇವಳ ಚಿಂತೆಯಿಂದ ಖಿನ್ನನಾದ ಅರಸನು ವಿದ್ಯಾರಣ್ಯರನ್ನು ಬೇಡಿಕೊಂಡು ಅವಳ ರಕ್ಷಣೆಯನ್ನು ಕೈಗೊಳ್ಳಬೇಕೆಂತಲೂ, ತಾನು ಯುದ್ಧದಲ್ಲಿ ಮಡಿದದ್ದೇ ಆದರೆ ಹುಕ್ಕರಾಯನು ಗಿರಿಜಾಂಬೆಯನ್ನು ಮದುವೆಯಾಗುವಂತೆ ಪ್ರೇರೇಪಿಸಬೇಕೆಂತಲೂ ಹೇಳಿಕೊಂಡನು. ಇದು ಎಲ್ಲರಿಗೂ ಒಪ್ಪಿಗೆಯಾಯ್ತು.

ಯುದ್ಧದಲ್ಲಿ ಜಂಬುಕೇಶ್ವರರಾಯನು ಮಡಿದನು. ಅರಮನೆಯು ಮುಸಲ್ಮಾನರ ವಶವಾಯಿತು. ಯುದ್ಧದಲ್ಲಿ ಅಸೀಮ ಸಾಹಸವನ್ನು ತೋರಿಸಿದ ಹುಕ್ಕಬುಕ್ಕರನ್ನು ತೊಗಲಕನು ಮೆಚ್ಚಿ, ತನ್ನ ಅಧಿಕಾರ ವರ್ಗಕ್ಕೆ ಸೇರಿಸಿಕೊಂಡು ಆನೆಗೊಂದಿಯಲ್ಲಿ ಬಿಟ್ಟುಹೋದನು. ಇತ್ತ ಗಿರಿಜಾಂಬೆಯು ವೀತಿಹೋತ್ರರ ರಕ್ಷಣೆಗೆ ಒಳಪಟ್ಟು ವನದೇವಿಯಂತೆ ಶೋಭಿಸುತ್ತಿದ್ದಳು. ಮುಸಲ್ಮಾನರ ಅಧೀನದಲ್ಲಿ ಆನೆಗೊಂದಿ ಪ್ರಜೆಗಳು ದುಃಖಿತರಾದರು. ಹೆಂಗಸರ ಮಾನಭಂಗವಾಗುತ್ತಿತ್ತು; ಗೋ-ಬ್ರಾಹ್ಮಣರ ಪತನವಾಗುತ್ತಿತ್ತು. ಇದರಿಂದ ಪ್ರಜೆಗಳು ಅಲ್ಲಲ್ಲಿ ಗುಂಪು ಕಟ್ಟಿ ದಂಗೆ ಏಳುತ್ತಿದ್ದರು. ಇದಕ್ಕೆಲ್ಲಾ ಹುಕ್ಕಬುಕ್ಕರೂ ಅವರ ಆಶ್ರಯದಾತರಾದ ವಿದ್ಯಾರಣ್ಯರೂ ಕಾರಣರೆಂದೂ ಬಾದಷಹನು ಬಗೆದನು. ಇವರು ರಾಜದ್ರೋಹವನ್ನು ನಿಲ್ಲಿಸದಿದ್ದಲ್ಲಿ ಅವರಿಗೆ ಮರಣದಂಡನೆಯನ್ನುಂಟು ಮಾಡುವುದಾಗಿಯೂ ಹೆದರಿಸಿ ತೊಗಲಕನು ಪತ್ರ ಬರೆದನು; ಉತ್ತರವಿಲ್ಲ. ಈ ವೇಳೆಗೆ ಯೋಧರಿಂದ ಸೈನ್ಯವನ್ನು ವಿದ್ಯಾರಣ್ಯರು ಕಟ್ಟಿದ್ದರು.

ತೊಗಲಕನ ಸೈನ್ಯವು ಆನೆಗೊಂದಿಗೆ ಬಂದು ಹುಕ್ಕಬುಕ್ಕರನ್ನು ಆಕ್ರಮಣ ಮಾಡಿತು. ಭಯಂಕರವಾದ ಯುದ್ಧವು ನಡೆದು ಹುಕ್ಕಬುಕ್ಕರು ಗೆದ್ದರು. ಬಳಿಕ ಕಂಪಿಲರಾಜ್ಯವನ್ನೂ ಮುಸಲ್ಮಾನರಿಂದ ಗೆದ್ದರು. ಎರಡು ಪಟ್ಟಣಗಳ ಮೇಲೂ ವಿಜಯ ಪತಾಕೆಗಳು ಹಾರಾಡಿದವು. ಸ್ವತಂತ್ರವಾದ ಈ ನಗರಗಳನ್ನು ತಳಿರುತೋರಣಗಳಿಂದ ಅಲಂಕರಿಸಿದರು. ಒಂದು ಶುಭ

ಮುಹೂರ್ತದಲ್ಲಿ ಹುಕ್ಕರಾಯನಿಗೂ ಗಿರಿಜಾಂಬೆಗೂ ವಿವಾಹವಾಯಿತು. ಗುರುಹಿರಿಯರ ಪೂಜೆಯನ್ನು ಯಥಾವಿಧಿಯಾಗಿ ನಡೆಸಿ, ಹುಕ್ಕನು ಪಟ್ಟಾಭಿಷಕ್ತನಾದನು. ವಿದ್ಯಾರಣ್ಯರ ಕನಸು ನನಸಾಯಿತು. ಕರ್ನಾಟಕ ರಾಜ್ಯದ ಅಡಿಗಲ್ಲನ್ನು ಹಾಕಿ ಕಟ್ಟಿದರು.

ಕಟ್ಟಿದ ರಾಜ್ಯವನ್ನು ಭದ್ರಪಡಿಸಲು ಗುರುದೇವರು ರಾಜಧಾನಿಯನ್ನು ವಿಜಯನಗರಕ್ಕೆ ಬದಲಾಯಿಸಿದರು. ಬುಕ್ಕನು ಯುವರಾಜನಾದನು. ಅವರಿಬ್ಬರೂ ಬಹಳ ಬೇಡಿಕೊಂಡು ವಿದ್ಯಾರಣ್ಯರನ್ನು ತಮ್ಮ ಆಚಾರ್ಯರಾಗಿಯೂ, ಮಂತ್ರಿಯಾಗಿಯೂ ನಿಲ್ಲಿಸಿಕೊಂಡು ಪ್ರತಿಯೊಂದು ವಿಷಯದಲ್ಲಿಯೂ ಅವರ ಅನುಜ್ಞೆ ಪಡೆದು ರಾಜ್ಯಭಾರ ಮಾಡುತ್ತಿದ್ದರು. ಮತ್ತೊಮ್ಮೆ ತಮ್ಮ ಸ್ವಪ್ನದಲ್ಲಿ ಕಾಣಿಸಿಕೊಂಡ ಭುವನೇಶ್ವರಿದೇವಿಯ ಸಲಹೆಯಂತೆ, ವಿದ್ಯಾರಣ್ಯರು ಹುಕ್ಕಬುಕ್ಕರು ಮಲಗಿ ನಿದ್ರಿಸುತ್ತಿದ್ದ ಆ ಹೊಂಗೆಯ ಮರ (ಅಂದರೆ ಸರ್ಪ ಹೆಡೆಯಾಡಿದ ಸ್ಥಳ) ದ ಬುಡದಲ್ಲಿ ಅಗೆಯಿಸಿ ನೋಡಲು, ಭೂಸ್ಥಾಯಿಯಾಗಿದ್ದ ಸಿಂಹಾಸನವನ್ನೂ, ಅಪಾರವಾದ ದ್ರವ್ಯರಾಶಿಯನ್ನೂ ತೆಗೆಯಿಸಿಕೊಂಡು ಬಂದರು. ರಾಜ್ಯದ ಉನ್ನತಿಗೆ ಆ ಹಣವನ್ನು ಉಪಯೋಗಿಸಲಾಯಿತು. ಒಂದು ಶುಭ ದಿನದಲ್ಲಿ ಹುಕ್ಕನಿಗೆ 'ಹರಿಹರರಾಯ'ನೆಂದು ನಾಮಕರಣ ಮಾಡಿದರು.

ಮಂತ್ರಿತ್ವವನ್ನು ಹಿಡಿದ ವಿದ್ಯಾರಣ್ಯರು ಸಣ್ಣಪುಟ್ಟ ರಾಜ್ಯಗಳನ್ನು ಒಟ್ಟು ಸೇರಿಸಿ ವಿಜಯನಗರಕ್ಕೆ ಸೇರಿಸಿದರು. ಅಪಾರವಾದ ಸೈನ್ಯವನ್ನು ಸಜ್ಜುಗೊಳಿಸಿಟ್ಟರು. ಸಾಹಿತ್ಯ, ಕಲೆ ಇವುಗಳ ಅಭಿವೃದ್ಧಿ ಮಾಡಿದರು. ಪಂಪಾಕ್ಷೇತ್ರವನ್ನು ಅತ್ಯಂತ ರಮ್ಯವಾಗಿ ಶಿಲ್ಪಶಾಸ್ತ್ರ ರೀತ್ಯಾ ಕಟ್ಟಿಸಿದರು. ಇಡೀ ದಕ್ಷಿಣ ದೇಶವೆಲ್ಲಾ ಹರಿಹರನ ಪ್ರಭುತ್ವವನ್ನು ಒಪ್ಪಿಕೊಂಡಿತು. ಹರಿಹರನು ಸಾರ್ವಭೌಮನೆಂಬ ಬಿರುದನ್ನು ಪಡೆದನು. ಹರಿಹರನು ಕಾಲವಾದನು. ಬುಕ್ಕನು ಅರಸನಾದನು. ಆತನೂ ಸಹ ವಿದ್ಯಾರಣ್ಯರನ್ನು ಒತ್ತಾಯಪಡಿಸಿ ಮಂತ್ರಿಯಾಗಿ ನಿಲ್ಲಿಸಿಕೊಂಡನು. ಇವನ ಕಾಲದಲ್ಲಿ ಬಹಮನೀ ರಾಜ್ಯದವರೊಡನೆ ಯುದ್ಧವಾಗಿ ಬುಕ್ಕನೇ ಜಯಶೀಲನಾದನು. ಹೀಗೆ ವಿಜಯನಗರವು ಮತ್ತೂ ವಿಸ್ತಾರವಾಯಿತು. ಇವನ ನಂತರ, ಇವನ ಮಗ ಇಮ್ಮಡಿ ಹರಿಹರರಾಯನಿಗೂ ವಿದ್ಯಾರಣ್ಯರು ಮಂತ್ರಿಯಾಗಿ, ರಾಜ್ಯದ

ಕೀರ್ತಿಯನ್ನು ಮತ್ತೂ ಹೆಚ್ಚಿಸಿದರು. ಹೀಗೆ ವಿದ್ಯಾರಣ್ಯರು ನಾಲ್ಕುಮಂದಿ ರಾಜರಿಗೆ ರಾಜಕೀಯ ಗುರುಗಳಾಗಿದ್ದರೂ, ರಾಜ್ಯವೈಭವದಿಂದ ನಿರ್ಲಿಪ್ತ ರಾಗಿಯೇ ಇದ್ದರು. ಸಂಸ್ಕೃತ ವಿದ್ಯಾಭ್ಯಾಸಕ್ಕೂ, ಸಾಹಿತ್ಯದ ಬೆಳವಣಿಗೆಗೂ ಪ್ರೋತ್ಸಾಹವನ್ನು ಕೊಟ್ಟು, ವೃದ್ಧಿಗೊಳಿಸಿದರು. ಸ್ವಯಂ, ವೇದಗಳಿಗೆ ಭಾಷ್ಯಗಳನ್ನು ಬರೆದರು; ಅಲ್ಲದೆ ಶಂಕರವಿಜಯ ಮತ್ತು ಪಂಚದಶಿ ಎಂಬ ಕಾವ್ಯಗಳನ್ನು ಬರೆದಿದ್ದಾರೆ; ಅನೇಕ ವೇದಾಂತ ಗ್ರಂಥಗಳನ್ನೂ ರಚಿಸಿ ದ್ದಾರೆ. ಹೀಗೆ ವಿಜಯನಗರವು ಅವರಿಂದ ಸಂಸ್ಕೃತಿ ವೈಭವದಿಂದ ತುಂಬಿತು.

ಒಟ್ಟಿನಲ್ಲಿ, ವಿದ್ಯಾರಣ್ಯರು ಒಬ್ಬ ಅಸಾಧಾರಣ ವ್ಯಕ್ತಿ. ಗುರುಹಿರಿಯ ರಲ್ಲಿ ಭಕ್ತಿಯನ್ನೂ ಚಿತ್ತಸ್ಥೈರ್ಯವನ್ನೂ ಉಳ್ಳವರು. ಅಲ್ಲದೆ ದೇಶಪ್ರೇಮಿ ಯಾಗಿಯೂ, ಸೇವಾಕಾಂಕ್ಷೆಯುಳ್ಳವರಾಗಿಯೂ ಇದ್ದರು. ಎಲ್ಲಕ್ಕೂ ಮಿಗಿಲಾಗಿ ಅವರು ಪರಧರ್ಮ ಸಹಿಷ್ಣುತೆಯುಳ್ಳವರಾಗಿದ್ದರು. ಅವರು ಕೇವಲ ಕಾವಿ ಧರಿಸಿ ಕಮಂಡಲವನ್ನು ಹಿಡಿದ ಕಾಡುಜೋಗಿಯಲ್ಲ. ಅವರು ವೀರ ಸಂನ್ಯಾಸಿ ಮತ್ತು ಧರ್ಮವೀರರು; ಅಷ್ಟೇ ಆತ್ಮಗೌರವವುಳ್ಳವರು. ಇದಲ್ಲದೆ, ವಿದ್ಯಾತೀರ್ಥರ ನಂತರ, ವಿದ್ಯಾರಣ್ಯರು ಶೃಂಗೇರಿ ಪೀಠವನ್ನು ಅಲಂಕರಿಸಿ, ಸನಾತನ ಧರ್ಮವನ್ನು ಉದ್ಧರಿಸಿದರು.

ಹೀಗೆ, ಕರ್ಣಾಟಕ ಸ್ಥಾಪನಾಚಾರ್ಯರಾದ ವಿದ್ಯಾರಣ್ಯರ ಜ್ಯೋತಿ ಕರ್ನಾಟಕದಲ್ಲಿ ನಂದಾದೀಪದಂತೆ ಬೆಳಗುತ್ತದೆ. ಈ ಮಹಾನುಭಾವರಿಗೆ ಪಂಪಾಕ್ಷೇತ್ರವು ಅವರ ಜೀವನರಂಗವಾಯಿತು. ಅವರು ನಮಗೆ ಚಿರಸ್ಮರ ಣೀಯರಾಗಿದ್ದಾರೆ.

## ಪ್ರಶ್ನೆಗಳು

೧. ಮಾಧವನ ವಿದ್ಯಾಭ್ಯಾಸವನ್ನು ತಿಳಿಸಿ.

೨. ಹುಕ್ಕ ಬುಕ್ಕರ ವಿಜಯನಗರ ಸ್ಥಾಪನೆಗೆ ಅರ್ಹರೆಂದು, ವಿದ್ಯಾರಣ್ಯರು ತಿಳಿದ ಬಗೆ ಹೇಗೆ?

೩. ವಿಜಯನಗರವು ಕಟ್ಟಲ್ಪಟ್ಟದ್ದು ಯಾರಿಂದ ? ಆ ಕೋಟೆಯು ರಾಜಧಾನಿಯಾಗಲು ಹೇಗೆ ಅರ್ಹತೆ ಪಡೆದಿತ್ತು?

೪. ಕರ್ನಾಟಕವು ಹುಕ್ಕ ಬುಕ್ಕರ ಕಾಲದಲ್ಲಿ ಹೇಗೆ ವಿಸ್ತರಿಸಿತು?

೫. ವಿದ್ಯಾರಣ್ಯರ ಗುಣಗಳನ್ನು ಬರೆಯಿರಿ.

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಙ್ತಿ | ಅಶುದ್ಧ | ಶುದ್ಧ |
|---|---|---|---|
| ೧೩ | ೧೫ | ಗೃಹಸ್ಥೆಯರಿದ್ದರು | ಗೃಹಸ್ಥೆಯರಾಗಿದ್ದರು. |
| ೧೫ | ೮ | ಸಿಂಗರಾಯ | ಸಿಂಗರಾರ್ಯ |
| ,, | ೧೪ | ಕೇಳನಗೆ | ಕೇಳಿನಗೆ |
| ೧೯ | ೧೨ | ಲೈ | ಲೇ |
| ,, | ೧೪ | ವುದು | ವುದು, |
| ,, | ೨೨ | ಣಿಯಾದ | ಣಿಯೂ ಆದ |
| ೩೦ | ೯ | ಅವಿರ್ಭಾಗ್ಯ | ಆ ನಿರ್ಭಾಗ್ಯ |
| ೩೬ | ೯ | ಸನ್ಯಾಸಿ | ಸಂನ್ಯಾಸಿ |
| | ೧೩ | ಮುಗುಳ | ಮುಗುಳು |
| | ,, | ಶ್ರೀರಂಗನಲ್ಲಿ | ಶ್ರೀರಂಗದಲ್ಲಿ |
| ೪೨ | ೫ | ಕೊಂಡಿದ್ದರು | ಕೊಂಡಿದ್ದನು |
| ,, | ೬ | ರಾಗಿದ್ದರು | ರಾಗಿದ್ದನು |
| ,, | ೧೫ | ಉಳ್ಳ | ಆದ |
| ೪೪ | ೧೨ | ಉದಾತ್ | ಉದಾತ್ತ |
| ೪೬ | ೨೪ | ವೆಂಬುದೂ | ವೆಂಬುದನ್ನೂ |
| ೪೭ | ೧೯ | ಕಟಗ | ಕುಟಿಗ |
| ೫೨ | ೩ | ವಣಿಜ ವರ್ತಕನು | ವಣಿಜರಾಜನು |
| ೫೫ | ೨೧ | ತ್ರಾಣಿ | ತ್ರಾಣೆ |
| ೫೬ | ೧೨ | ಕರಗಿಸಿತು | ಕರಗಿಸಿತು ; |
| ೫೭ | ೨೩ | ಆ ಎಂಬ ಅಕ್ಷರವನ್ನು | ಬಿಡಬೇಕು |
| ೬೪ | ೧ | ತೃಪ್ತೃ | ತೃಪ್ತ |
| ,, | ೧೪ | ಶಾಪಕ್ಕೆ | ಪಾಶಕೆ |

| | | | |
|---|---|---|---|
| ೭೫ | ೩ | ಅವುನುಷಾ | ಅ ವಾನುಷಾ |
| ೭೧ | ೪ | ನಿರತಸಾಗಿ | ನಿರತರಾಗಿ |
| ೭೭ | ೧೫ | 'ಕುತಂತ್ರಿಯು' ಇದನ್ನು ಬಿಟ್ಟು ಓದಬೇಕು | |
| ೮೩ | ೮ | ಆತನದಲ್ಲಿ | ಆತನಲ್ಲಿ |
| ೮೬ | ೨೦ | ಕುರಿತು ಒಂದೊಂದು | ಕುರಿತು ಹೇಳಿದ ಒಂದೊಂದು |
| ೮೭ | ೧೮ | ತೆರಳು | ತೆರು |
| ೯೨ | ೨೪ | 'ಭೂಜಾತೆಯೊಡನೆ' ಬಿಟ್ಟು ಓದಬೇಕು | |
| ೯೩ | ೯ | ಪವಿತ್ರತೆ | ಪತಿವ್ರತೆ |
| ೯೪ | ೧ | ಕೋರಿಕೆಯ | ತೋರಿಕೆಯು |
| ೧೦೦ | ೭ | ಪುಟ್ಟಿಗೆ, ಮುತ್ತುವು | ಪುಟ್ಟಿಗೆ ಕಾರಣ, ಮುತ್ತುವು |
| ೧೦೫ | ೧೭ | ಮಿಚಣ್ಣ | ಮಿಂಚಣ್ಣ |
| ೧೦೯ | ೨೫ | ನಿಲ್ಲುವೆನು," ಹೇಳಿ | ನಿಲ್ಲುವೆನು," ಎಂದು ಹೇಳಿ |

## ಅರ್ಥಕೋಶ

ತಲ್ಲೀನ–ಒಂದೇ ಮನಸ್ಸಿನಿಂದ, ಕಾರ್ಪಣ್ಯ–ಕಷ್ಟಕಾಲ, ಅನುವು–ಸಹಾಯ, ಅಸಂಬದ್ಧ–ಅಯೋಗ್ಯ, ಹಾತೊರೆ–ಬಯಸು, ಒಲವು–ಪ್ರೀತಿ, ಉಲ್ಲೇಖಿಸಿರುವ–ಹೇಳಿರುವ, ಆಣತಿ – ಆಜ್ಞೆ ; ಅಪ್ಪಣೆ, ದೇಸಿ – ಉಡಿಗೆ, ಅಪ್ರತಿಭರಾಗುವಂತೆ–ಆಶ್ಚರ್ಯಪಡುವಂತೆ, ಕರ–ಕೈ, ಸೃಜಿಸಿದ–ಬರೆದ, ಅನನ್ಯ–ಸದಾ, ಹುರುಪು–ಉತ್ಸಾಹ, ಮುಗಿಲು–ಮೋಡ, ಮರಳಿ–ಹಿಂತಿರುಗಿ, ತಣಿ–ಸಂತೋಷಪಡು, ಉತ್ಪಾದಿಸುವ–ತಯಾರಿಸುವ, ಧುರಂಧರ–ಮಗ್ನ, ನಂಜು–ವಿಷ, ಜೀವತಳೆ–ಪ್ರಾಣ ತುಂಬಿಕೊ, ಪೀಠೋಪಕರಣ–ಕುರ್ಚಿ ; ಮೇಜು ಇತ್ಯಾದಿ. ಸಾರುವುದು – ಹೋಗುವದು, ಏಕಾಗ್ರತೆ–ನಿಶ್ಚಲತೆ, ಸನ್ನಿಹಿತ–ಸಮೀಪಿಸು, ಗಣನೆ–ಲೆಕ್ಕ, ತಳೆದ–ಹೊಂದಿದ, ಧಾವಿಸಿ–ಓಡಿ, ಧರಿತ್ರಿ–ಭೂಮಿ, ವೀತಿಹೋತ್ರಿ–ಅಗ್ನಿ.